39 (परिक्रम्य) एषा सीता पादपमूलमाश्रित्य ध्यानसंवीतहृदयानशन-क्षामवदना स्वदेहमिव प्रवेष्टुकामा सङ्गूढस्तनोदरी दुर्दिनान्तर्गता चन्द्रलेखेव राक्षसीगणपरिवृतोपविष्टा । यैषा,

40 अपास्य भोगान् मां चैव श्रियं च महतीमिमाम् ।
मानुषे न्यस्तहृदया नैव वश्यत्वमागता ॥१२॥

---

lotus groves, and with the shining of a mirror made of silver, having oppressed my heart by his numerous rays, is rising up spreading his splendour in the sky. [11]

39 (*Moving forward*) Here is Sitā; resorting to the foot of the tree, with her heart absorbed in meditation, with her face pale from fasting, and with her breasts and belly closely concealed desiring to sink them within her frame, as it were, she is sitting surrounded by a group of Rākṣasa women, just like a digit of the moon in the midst of a shower of rain. And she,—

40 Discarding all joys and me and this mighty fortune, and having fixed her heart on a mortal,—(she) has not at all become subservient to me. [12]

---

ಪ್ರಿಯನೂ ಆದ ಈ ಶಶಾಂಕ (ಚಂದ್ರ) ನು ತನ್ನ ರಶ್ಮಿಸಮೂಹಗಳಿಂದ ನನ್ನ ಹೃದಯವನ್ನು ಪೀಡಿಸಿ ವಿಜೃಂಭಿಸುತ್ತಾ ಆಕಾಶದಲ್ಲಿ ಉದಯಿಸುತ್ತಿದ್ದಾನೆ.

39 (ಮುಂದೆ ನಡೆದು) ಈ ಸೀತೆ ಮರದ ಬುಡದಲ್ಲಿ ಕುಳಿತು ಧ್ಯಾನ ಮಗ್ನ ಹೃದಯಳೂ, ಊಟವಿಲ್ಲದೆ ಬಾಡಿದ ಮುಖವುಳ್ಳವಳೂ, ತನ್ನ ದೇಹ ದೊಳಗೇ ಅಡಗಿಕೊಳ್ಳಬಯಸುವಂತಿರುವವಳೂ, ಉಡುಗಿಹೋದ ಸ್ತನ ಮತ್ತು ಉದರವುಳ್ಳವಳೂ ಆಗಿ ಮೋಡಗಳ ಮಧ್ಯೆ ಸೇರಿಕೊಂಡ ಚಂದ್ರನ ಕಲೆ ಯಂತೆ ರಾಕ್ಷಸಿಯರ ಸಮೂಹದಿಂದ ಸುತ್ತುವರಿಯಲ್ಪಟ್ಟು ಕುಳಿತಿದ್ದಾಳೆ. ಇವಳಾದರೋ—

40 ಭೋಗಗಳನ್ನೂ ನನ್ನನ್ನೂ ಈ ಮಹದೈಶ್ವರ್ಯವನ್ನೂ ಅಲ್ಲಗಳೆದು, ಮಾನವನಲ್ಲಿ ಮನಸ್ಸಿಟ್ಟವಳಾಗಿ, ನನ್ನ ಆಧೀನ್ಯಕ್ಕೆ ಬಂದೇ ಇಲ್ಲ! [೧೨]

[41] हनूमान्—हन्त ! सुविज्ञातम् ।

[42] इयं सा राजतनया पत्नी रामस्य मैथिली ।
सिंहदर्शनवित्रस्ता मृगीव परितप्यते ॥१३॥

[43] रावणः—(उपेत्य)

सीते ! त्यज त्वं व्रतमुग्रचर्यं भजस्व मां भामिनि ! सर्वगात्रैः ।
अपास्य तं मानुषमद्य भद्रे ! गतायुषं कामपथान्निवृत्तम् ॥१४॥

[44] सीता — हास्यः [1]खलु रावणकः, यो वचनगतसिद्धिमपि न जानाति[2] । [हस्सो [1]खु रावणओ, जो वअणगदसिद्धिपि ण [2]जाणादि ।]

[1] खल्वसि (खु सि) [2] जानासि (जाणासि)

[41] HANŪMĀN—Ah ! it is clearly known ;

[42] This is that princess Maithili, wife of Rāma ; she is annoyed like a female deer frightened at the sight of a lion.

[43] RĀVAṆA—(*going near*) Sita, leave off this vow of a severe course. Accept me, fair lady, with all your limbs now, rejecting that mortal who is averse to the ways of love and is as good as dead, O good lady ! [14]

[44] SITĀ—Silly Rāvaṇa is indeed to be laughed at, as he is not aware of the mystic effect of his own words !

[41] ಹನೂಮಾನ್—ಓಹೋ! ಸ್ಪಷ್ಟವಾಗಿ ತಿಳಿಯಿತು.

[42] ಇವಳೇ ಆ ರಾಜಕುಮಾರಿ ಮೈಥಿಲಿ, ರಾಮನ ಪತ್ನಿ; ಸಿಂಹ ದರ್ಶನದಿಂದ ಹೆದರಿದ ಹೆಣ್ಣು ಜಿಂಕೆಯಂತೆ ಪರಿತಪಿಸುತ್ತಿದ್ದಾಳೆ. [೧೩]

[43] ರಾವಣ—(ಹತ್ತಿರಕ್ಕೆ ಬಂದು) ಸೀತೆ! ಉಗ್ರವಾದ ಈ ವ್ರತಾಚರಣೆಯನ್ನು ಬಿಟ್ಟುಬಿಡು. ಎಲೈ ಭಾಮಿನಿ! ಆಯುಸ್ಸು ಮುಗಿದವನೂ ಪ್ರೀತಿಯ ಮಾರ್ಗದಿಂದ ಹೊರತಾದವನೂ ಆದ ಆ ಮನುಷ್ಯನನ್ನೀಗ ತೊರೆದು ನಿನ್ನೆಲ್ಲ ಅವಯವಗಳಿಂದಲೂ ನನ್ನನ್ನು ಸೇರು, ಮಂಗಳಕರಳೇ! [೧೪]

[44] ಸೀತೆ—(ತನ್ನ) ಮಾತಿನಲ್ಲೇ ಸೇರಿರುವ ಸಿದ್ಧಿಯನ್ನರಿಯದ ಈ ಕ್ಷುದ್ರ ರಾವಣ ಹಾಸ್ಯಾಸ್ಪದನೇ ಅಲ್ಲವೇ!

45 हनूमान्—( सक्रोधम् ) अहो रावणस्यावलेपः !

46 तौ च बाहू न विज्ञाय तच्चापि सुमहद्धनुः ।
सायकं चापि रामस्य गतायुरिति भाषते ॥१५॥

47 न शक्नोमि रोषं धारयितुम् । भवतु, अहमेवार्यरामस्य कार्यं साधयामि । अथवा,

48 यद्यहं रावणं हन्मि कार्यसिद्धिर्भविष्यति ।
यदि मां प्रहरेद्रक्षो महत्कार्यं विपद्यते ॥१६॥

---

45 HANŪMĀN—*(Angrily)* Ah, the arrogance of Rāvaṇa !

46 Not knowing anything of those two arms, that mighty bow and that arrow of Rāma, he says that "he is as good as dead" ! [15]

47 I am unable to subdue my anger. Well; I myself will accomplish the task of noble Rāma. Or,—

48 If I kill Rāvaṇa, there will be the accomplishment of the task ; but, if the demon should hit me down, a great task will fail. [16]

---

45 ಹನೂಮಾನ್—(ಕೋಪದಿಂದ) ಅಹೋ ರಾವಣನ ಗರ್ವವೆಷ್ಟು !

46 ರಾಮನ ಆ ಎರಡು ಬಾಹುಗಳನ್ನೂ ಆ ತುಂಬ ದೊಡ್ಡ ಧನುಸ್ಸನ್ನೂ ಆ ಬಾಣವನ್ನೂ ಅರಿಯದೆ 'ಆಯುಸ್ಸು ಮುಗಿದವನು' ಎಂದು ಹೇಳುತ್ತಿದ್ದಾನೆ !

47 ಕೋಪವನ್ನು ತಡೆಯಲಾರೆ. ಒಳ್ಳೆಯದು; ನಾನೇ ಆರ್ಯ ರಾಮನ ಕಾರ್ಯವನ್ನು ಸಾಧಿಸಿಬಿಡುತ್ತೇನೆ. ಅಥವಾ—

48 ಒಂದು ವೇಳೆ ರಾವಣನನ್ನು (ನಾನು) ಕೊಂದೇ ಬಿಟ್ಟರೆ ಕಾರ್ಯಸಿದ್ಧಿಯಾಗುವುದು. ರಾಕ್ಷಸನೇ ನನ್ನನ್ನು ಕೊಂದು ಬಿಟ್ಟರೆ ಒಂದು ದೊಡ್ಡ ಕೆಲಸವೇ ನಷ್ಟವಾಗಿ ಬಿಡುತ್ತದೆ. [೧೬]

[49] रावणः—

वरतनु ! तनुगात्रि ! कान्तनेत्रे !
कुवलय-दाम-निभां विमुच्य वेणीम् ।
बहुविधमणिरत्नभूषिताङ्गं
दशशिरसं मनसा भजस्व देवि ॥१७॥

[50] सीता—हं ! विपरीतः खलु धर्मः, यज्जीवति खल्वयं पापराक्षसः !
[हं ! विपरीओ खु धम्मो, जं जीवदि खु अअं पापरक्खसो !]

[51] रावणः—ननु देवि !

[52] सीता—शप्तोऽसि । [सत्तोऽसि ।]

---

[49] RĀVAṆA--O lady of fair form, of slender limbs and of lovely eyes! Loosening that braid resembling a garland of blue lotuses, take to your heart this ten-headed (Rāvaṇa) whose limbs are adorned with various kinds of gems and precious stones, O ( my ) queen? [17]

[50] SĪTĀ—Hum! Righteousness is reversed, as this sinful demon lives.

[51] RĀVAṆA—And O queen!

[52] SĪTĀ—You are cursed!

---

[49] ರಾವಣ—ಶ್ರೇಷ್ಠವಾದ ಶರೀರವುಳ್ಳವಳೇ! ತೆಳ್ಳನೆಯ ದೇಹದವಳೇ! ಸುಂದರವಾದ ಕಣ್ಣುಳ್ಳವಳೇ! ಕುವಲಯ ಪುಷ್ಪಗಳ ದಂಡೆಯನ್ನು ಹೋಲುವ (ಏಕ) ವೇಣಿಯನ್ನು ಬಿಚ್ಚಿಹಾಕಿ, ಬಹುವಿಧರತ್ನಗಳಿಂದ ಭೂಷಿತವಾದ ಅಂಗಗಳುಳ್ಳ (ಈ) ಹತ್ತು ತಲೆಯ ರಾವಣನನ್ನು ಮನಃಪೂರ್ವಕವಾಗಿ ಸೇರು, ದೇವಿ!

[50] ಸೀತೆ—ಹಂ! ಈ ಪಾಪಿ ರಾಕ್ಷಸ ಇನ್ನೂ ಜೀವಿಸಿರಬೇಕಾದರೆ ಧರ್ಮ ಹಿಂದು ಮುಂದಾಗಿ ಬಿಟ್ಟಿದೆ.

[51] ರಾವಣ—ದೇವಿ!

[52] ಸೀತೆ—(ಶಪ್ತೋಽಸಿ) ಶಪಿಸಲ್ಪಟ್ಟಿದ್ದೀಯೆ!

[53] रावणः—हहह ! अहो पतिव्रतायास्तेजः !

[54] देवाः सेन्द्रादयो भग्ना दानवाश्च मया रणे ।
सोऽहं मोहं गतोऽस्म्यद्य सीताया स्त्रिभिरक्षरैः ॥१८॥

[55] ( नेपथ्ये ) [1]जयतु देवः ! जयतु लङ्केश्वरः ! जयतु स्वामी ! जयतु महाराजः ! दश नाडिकाः पूर्णाः । [2]अतिक्रामति स्नानवेला । इत इतो महाराजः । (निष्क्रान्तः सपरिवारो रावणः)

[56] हनूमान्—हन्त ! निर्गतो रावणः । सुप्ताश्च राक्षसस्त्रियः । अयं

---

[1] 'जयतु देवः....जयतु महाराजः' इति नास्ति । [2] गतः पूर्वो यामः । अति०

---

[53] RĀVAṆA—Ha, ha, ha! How great the mystic power of the lady who is devoutly attached to her husband!

[54] Gods inclusive of Indra and others, and the dānavas were crushed by me in battle; I, such a person, am now embarassed by the three syllables of Sītā. [18]

[55] *(Behind the curtain)* Victory to His Majesty! Victory to the lord of Laṅkā! Victory to our master! Victory to the great king! Ten nāḍikas are over. The bathing time passes. This way, great king, this way. *(Exit Rāvaṇa with retinue)*

[56] HANŪMĀN—Good! Rāvaṇa is gone and the Rākṣasa

---

[53] ರಾವಣ—ಹಹಹ, ಪತಿವ್ರತೆಯ ತೇಜಸ್ಸು ಅದೆಷ್ಟು ಆಶ್ಚರ್ಯಕರ!

[54] ಇಂದ್ರನೇ ಮೊದಲಾದವರಿಂದ ಕೂಡಿದ ದೇವತೆಗಳೂ ದಾನವರೂ ನನ್ನಿಂದ ಯುದ್ಧದಲ್ಲಿ ಭಗ್ನರಾದರು. ಅಂತಹ ನಾನು ಈಗ ಸೀತೆಯ (ಶಪ್ತೋಽಸಿ ಎಂಬ) ಮೂರಕ್ಷರಗಳಿಂದ ತಿಳಿವು ನೀಗಿದವನಾಗಿಬಿಟ್ಟಿದ್ದೇನಲ್ಲ! [೧೮]

[55] (ತೆರೆಯ ಹಿಂದೆ) ದೇವನಿಗೆ ಜಯವಾಗಲಿ! ಲಂಕೇಶ್ವರನಿಗೆ ಜಯವಾಗಲಿ! ಸ್ವಾಮಿಗೆ ಜಯವಾಗಲಿ! ಮಹಾರಾಜನಿಗೆ ಜಯವಾಗಲಿ! ಹತ್ತು ಘಳಿಗೆಗಳು ತುಂಬಿದುವು. ಸ್ನಾನದ ವೇಳೆ ಮೀರುತ್ತಿದೆ. ಈ ಕಡೆ, ಈ ಕಡೆಗೆ ಮಹಾರಾಜನು (ಬಿಜಯ ಮಾಡಿಸಬೇಕು). (ಪರಿವಾರ ಸಹಿತನಾಗಿ ರಾವಣನು ಹೋಗುತ್ತಾನೆ)

[56] ಹನೂಮಾನ್—ಅಬ್ಬ! ರಾವಣ ಹೊರಟು ಹೋದ; ರಾಕ್ಷಸಸ್ತ್ರೀಯರೂ

कालो देवीमुपसर्पितुम् । (कोटरादवरुह्य) जयत्वविधवा !

57 प्रेषितोऽहं नरेन्द्रेण रामेण विदितात्मना ।
[1]त्वद्गतस्नेहसन्तापविक्लवीकृतचेतसा ॥१९॥

58 सीता—(आत्मगतम्) को नु खल्वयम् ? पापराक्षस आर्यपुत्र-संबन्धीत्यात्मानं व्यपदिश्य वानररूपेण मां वञ्चयितुकामो भवेत् । भवतु, तूष्णीका भविष्यामि । [को णु खु अअं ? पावरक्खसो अय्यउत्तकेरओ त्ति अत्ताणं ववदिसिअ वाणररूवेण मं वञ्चिदुकामो भवे । भोदु तुह्णिआ भविस्सं ।]

---

[1] त्वद्गतस्नेहसन्तापाद्विक्ल०

---

women are asleep. This is the time to approach the queen. *(Coming down from the hollow)* Hail to the lady with a long-lived husband!

57 I am sent by king Rāma, whose courage is well-known and whose mind is distressed by anguish through love for you. [19]

58 SITĀ—*(To herself)* Who, indeed, can this be? That wicked Rākṣasa, under the guise of a monkey, might be trying to deceive me by posing himself as one related to my lord. Well; I shall remain silent.

---

ನಿದ್ದೆ ಹೋಗಿದ್ದಾರೆ. ದೇವಿ (ಸೀತೆ)ಯ ಬಳಿ ಹೋಗಲು ಇದೇ (ಸರಿಯಾದ) ಕಾಲ. (ಪೊಟರೆಯಿಂದ ಇಳಿದು ಬಂದು) ಪತಿವ್ರತೆಯಾದ ಮುತ್ತೈದೆಗೆ ಜಯವಾಗಲಿ!

57 (ಎಲ್ಲರಿಗೂ) ತಿಳಿದ ಎದೆಗಾರಿಕೆಯುಳ್ಳ ಮತ್ತು ನಿನ್ನಲ್ಲಿ ನೆಲಸಿದ ಸ್ನೇಹದಿಂದಾದ ಸಂತಾಪದಿಂದ ಕಳವಳಗೊಂಡ ಮನಸ್ಸುಳ್ಳ ನರೇಂದ್ರನಾದ ರಾಮನಿಂದ ನಾನು ಕಳುಹಿಸಲ್ಪಟ್ಟಿದ್ದೇನೆ. [೧೯]

58 ಸೀತೆ—(ಸ್ವಗತ) ಇವನು ಯಾರಿರಬಹುದು ? ಪಾಪಿಯಾದ ರಾಕ್ಷಸನೇ ಆರ್ಯಪುತ್ರನ ಸಂಬಂಧಿಯೆಂದು ತನ್ನನ್ನು ಮರೆಯಿಸಿಕೊಂಡು ವಾನರ ರೂಪದಿಂದ ನನ್ನನ್ನು ವಂಚಿಸಲಪೇಕ್ಷೆಯುಳ್ಳವನಾಗಿರಬಹುದು ! ಇರಲಿ ; (ಮಾತಾಡದೆ) ಸುಮ್ಮನೆಯೇ ಇರುತ್ತೇನೆ.

59 हनूमान् — कथं न [2]प्रत्येति भवती ? अलमन्यशङ्कया । श्रोतुमर्हति भवती ।

60 इक्ष्वाकुकुलदीपेन सन्धाय हरिणा[3] त्वहम् ।
प्रेषितस्त्वद्विचित्यर्थं हनूमान् नाम वानरः ॥२०॥

61 सीता—(आत्मगतम्) यो वा को वा भवतु । आर्यपुत्रनामसङ्कीर्तनेनाहमेतेनाभिभाषिष्ये । (प्रकाशम्) भद्र ! को वृत्तान्त आर्यपुत्रस्य ? [जो वा को वा भोदु । अय्यउत्तणामसंकित्तणेण अहं एदेण अभिभासिस्सं । (प्रकाशम्) भद्द ! को वुत्तन्तो अय्यउत्तस्स ?]

---

[2] प्रत्याययति [3] हरिरित्यहम्

---

59 HANŪMĀN—Why? Don't you believe me? Cease to have any suspicion that I am an alien person. Please listen.

60 I am the monkey named Hanūman sent to search for you by the monkey-king after entering into an alliance with (Rāma,) the light af the Ikṣvāku race. [20]

61 SĪTĀ—(*To herself*) Be he who he may; I will talk to him as he has uttered the name of my husband. (*Aloud*) Good sir, what news of my lord?

---

59 ಹನೂಮಾನ್— ಪೂಜ್ಯೆಯಾದ ನೀನು ನನ್ನನ್ನು ನಂಬುವುದೇ ಇಲ್ಲವಲ್ಲ? ನಾನು ಅನ್ಯನೆಂಬ ಶಂಕೆ ಬೇಡ. ಆಲಿಸೋಣಾಗಲಿ.

60 ಇಕ್ಷ್ವಾಕುಕುಲದೀಪನೊಡನೆ ಸಂಧಿಮಾಡಿಕೊಂಡ ವಾನರ (ರಾಜ ಸುಗ್ರೀವ)ನಿಂದ ನಿನ್ನನ್ನು ಹುಡುಕುವುದಕ್ಕಾಗಿ ಕಳುಹಿಸಲ್ಪಟ್ಟ ಹನುಮಂತನೆಂಬ ವಾನರನೇ ನಾನು. [೨೦]

61 ಸೀತೆ—(ಸ್ವಗತ) ಯಾವನೇ ಆದರೂ ಆಗಿರಲಿ. ಆರ್ಯಪುತ್ರನ ನಾಮಸಂಕೀರ್ತನ(ವನ್ನು ಇವನು) ಮಾಡಿರುವುದರಿಂದ ಇವನ ಜತೆಯಲ್ಲಿ ಮಾತಾಡುತ್ತೇನೆ. (ಪ್ರಕಾಶ) ಭದ್ರ! ಆರ್ಯಪುತ್ರನ ಸಮಾಚಾರವೇನು?

62 हनूमान्—भवति, श्रूयताम्—

अनशन-परितप्तं पाण्डु [1]स क्षामवक्त्रं
तव वरगुण-चिन्ता-वीत-लावण्यलीलम् ।
वहति विगतधैर्यं हीयमानं शरीरं
मनसिज-शर-दग्धं बाष्पपर्याकुलाक्षम् ॥२१॥

63 सीता—([2]आत्मगतम्) हा धिक् ! [3]व्रीडिता खल्वस्मि मन्दभागा एवं शोचन्तमार्यपुत्रं श्रुत्वा । आर्यपुत्रस्य विरहपरिश्रमोऽपि मे सफलः संवृत्त[4] इति पश्यामि, यदि खल्वयं वानरः सत्यं मन्त्रयते ।

---

[1] संक्षाम० [2] स्वगतम् [3] अदिधीरा, पीडिदा [4] संवुत्तो । जहि (यदि)....

---

62 HANŪMĀN—Listen, lady—

He bears a pining body which is bereft of firmness, scorched by the arrows of the mind-born, with eyes filled with tears, subjected to pain by fasting, pale with an emaciated face and whose grace and charm are lost by brooding over your excellent virtues. [21]

63 SĪTĀ—(*To herself*) Alas! unfortunate me! I am really abashed to hear that my lord grieves thus. I see that even the pain of separation of my lord has borne fruit on me,

---

62 ಹನೂಮಾನ್—ಪೂಜ್ಯಳೇ, ಆಲಿಸೋಣಾಗಲಿ.

ಊಟವಿಲ್ಲದೆ ಕಾದುಹೋದ, ಬಿಳುಪೇರಿದ, ಬಾಡಿದ ಮುಖವುಳ್ಳ, ನಿನ್ನ ಶ್ರೇಷ್ಠವಾದ ಗುಣಗಳ ಆಲೋಚನೆಯಿಂದ ನೀಗಿದ ಲಾವಣ್ಯ ಮತ್ತು ಲೀಲೆಯುಳ್ಳ, ಧೈರ್ಯ ಉಡುಗಿದ, ಕುಂದಿಹೋಗುತ್ತಿರುವ, ಮನ್ಮಥನ ಬಾಣಗಳಿಂದ ದಗ್ಧವಾದ ಮತ್ತು ಕಣ್ಣೀರಿನಿಂದ ಪರ್ಯಾಕುಲಗೊಂಡ ಕಣ್ಣುಗಳುಳ್ಳ ಶರೀರವನ್ನವನು ವಹಿಸಿದ್ದಾನೆ. [೨೧]

63 ಸೀತೆ—(ಸ್ವಗತ) ಹಾ ಧಿಕ್! ಆರ್ಯಪುತ್ರನು ಹೀಗೆ ಶೋಕಿಸುತ್ತಿರುವನೆಂದು ಕೇಳಿ ಮಂದಭಾಗಿನಿಯಾದ ನಾನು ನಾಚುತ್ತೇನೆ. ಈ ವಾನರ ನಿಜ

आर्यपुत्रस्यास्मिन् जनेऽनुक्रोशं परिश्रमं च श्रुत्वा सुखस्य दुःखस्य चान्तरे द्रोलायत इव मे हृदयम्। (प्रकाशम्) भद्र, कथं युष्माभिः आर्यपुत्रस्य सङ्गमो जातः ? [हद्धि ! वीळिआ खु ह्मि मन्दभाआ एवं सोअन्तं अय्यउत्तं सुणिअ। अय्यउत्तस्स विरहपरिस्समो वि मे सफळो संवुत्तो त्ति पेक्खामि, जदि खु अअं वाणरो सच्चं मन्तेदि। अय्यउत्तस्स इमस्सिं जणे अणुक्कोसं परिस्समं च सुणिअ सुहस्स दुक्खस्स अ अन्तरे डोळाअदि विअ मे हिअअं। (प्रकाशम्) भद्द ! कहं तुम्हेहि अय्यउत्तस्स सङ्गमो जादो ?]

64 हनूमान् —भवति, श्रूयताम्—

२१. हत्वा वालिनमाहवे कपिवरं त्वत्कारणादग्रजं[1]
सुग्रीवस्य कृतं नरेन्द्रतनये ! राज्यं हरीणां ततः ।

---

[1] ०कारणाद्धामिनि

---

in case this monkey is speaking the truth. Hearing of my husband's love and suffering for this person (i.e. myself), my heart is swinging, as it were, between joy and sorrow. (*Aloud*) Good sir, how came my lord's alliance with you monkeys?

64 HANŪMĀN—Your ladyship may listen;

The kingdom of the monkeys was made Sugrīva's (by Rāma) after slaying for your sake his elder brother Vālin,

---

ವನ್ನೇ ಹೇಳುತ್ತಿದ್ದರೆ ಆರ್ಯಪುತ್ರನ ವಿರಹಪರಿಶ್ರಮವೂ ನನ್ನಷ್ಟಕ್ಕೆ ಸಫಲ ವಾಯಿತೆಂದೇ ತಿಳಿಯುತ್ತೇನೆ. ಈ ಸಾಮಾನ್ಯ ಮನುಷ್ಯಳಾದ ನನ್ನಲ್ಲಿ ಆರ್ಯ ಪುತ್ರನ ಅನುಕ್ರೋಶವನ್ನೂ ಪರಿಶ್ರಮವನ್ನೂ ಕೇಳಿ ನನ್ನ ಹೃದಯ ಸುಖ- ದುಃಖಗಳ ಮಧ್ಯೆ ತೂಗಾಡುತ್ತಿದೆ. (ಪ್ರಕಾಶ) ಭದ್ರ! ನಿಮ್ಮೊಡನೆ ಆರ್ಯಪುತ್ರನ ಸಂಗಮ ಹೇಗಾಯಿತು ?

64 ಹನೂಮಾನ್—ಪೂಜ್ಯಳೇ, ಕೇಳೋಣಾಗಲಿ.

ರಾಜಕುಮಾರಿಯೇ! ನಿನ್ನ ಕಾರಣದಿಂದ ಅಗ್ರಜನಾದ ಕಪಿರಾಜ ವಾಲಿಯನ್ನು ಯುದ್ಧದಲ್ಲಿ ಕೊಂದು ವಾನರ ರಾಜ್ಯವು ಸುಗ್ರೀವನದಾಗಿ ಮಾಡ

राज्ञा त्वद्विचयाय चापि हरयः सर्वा दिशः प्रेषिता-
स्तेषामस्म्यहमद्य गृध्रवचनात् त्वां देवि ! संप्राप्तवान् ॥

[65] अपि च,....ईदृशमिव ।

[66] सीता—अहो अकरुणाः खल्वीश्वरा एवं शोचन्तमार्यपुत्रं कुर्वन्तः
[अहो अअरुणा क्खु इस्सरा एव्वं सोअन्तं अय्यउत्तं करअन्तो !]

[67] हनूमान्—भवति, मा विषादेन । रामो हि,

[68] प्रगृहीतमहाचापो वृतो वानरसेनया ।
समुद्धर्तुं दशग्रीवं लङ्कामेवाभियास्यति ॥२३॥

---

the celebrated ape, in a battle, O princess! Therefore, monkeys were sent in all directions to search for you, by our king. I, one of them, have come to you to-day, O queen, through the (guiding) words of a vulture. [22]

[65] Moreover, thus....thus....

[66] SĪTĀ—Oh pitiless are the gods in making my husband thus sorrowful.

[67] HANŪMĀN—Worthy lady, do not grieve. For, Rāma,-

[68] Holding firmly his great bow and surrounded by an army of monkeys, will invade Lankā directly to extirpate the ten-necked Rāvaṇa. [23]

---

ಲ್ಪಟ್ಟಿತು. ಬಳಿಕ, (ಆ) ರಾಜನಿಂದ ನಿನ್ನನ್ನು ಹುಡುಕುವ ಸಲುವಾಗಿ ಕಪಿಗಳು ಎಲ್ಲ ದಿಕ್ಕುಗಳಿಗೂ ಕಳುಹಿಸಲ್ಪಟ್ಟುವು. ಅವುಗಳಲ್ಲಿ ಒಬ್ಬನಾದ ನಾನು (ಸಂಪಾತಿಯೆಂಬ) ಹದ್ದಿನ ಮಾತಿನ ಮೇಲೆ ಇಂದು ನಿನ್ನಲ್ಲಿಗೆ ಬಂದಿದ್ದೇನೆ, ದೇವಿಯೇ! [೨೨]

[65] ಮತ್ತೂ..............ಹೀಗೆ....

[66] ಸೀತೆ—ಅಹೋ, ಆರ್ಯಪುತ್ರನನ್ನು ಹೀಗೆ ಶೋಕಿಸುವಂತೆ ಮಾಡುತ್ತಿರುವ ದೇವತೆಗಳು ನಿಷ್ಕರುಣೆಗಳೇ ಅಲ್ಲವೆ!

[67] ಹನೂಮಾನ್—ಪೂಜ್ಯಳೇ, ವಿಷಾದಿಸಬೇಡ. ರಾಮನಾದರೋ—

[68] ದೊಡ್ಡ ಧನುಸ್ಸನ್ನು ಹಿಡಿದು ವಾನರಸೇನೆಯಿಂದ ಕೂಡಿಕೊಂಡು ದಶಗ್ರೀವನನ್ನು ಕಿತ್ತೊಗೆಯಲು ಲಂಕೆಯನ್ನೇ ಮುತ್ತುವವನಾಗಿದ್ದಾನೆ. [೨೩]

[69] सीता—किन्नु खलु स्वप्नो मया दृष्टः! [1]भद्र! अपि सत्यम्? न जानामि। [किण्णु खु सिविणो मए दिट्ठो! [1]भद्द! अवि सच्चं? ण आणामि।]

[70] हनूमान्—(स्वगतम्) भोः कष्टम्!

[71] एवं गाढं परिज्ञाय भर्तारं भर्तृवत्सला।
न प्रत्याययति शोकार्ता यथा देहान्तरं गता॥२४॥

[72] (प्रकाशम्) भवति, अद्यमिदानीं,

[73] समुदितवरचापबाणपाणिं पतिमिह राजसुते! तवानयामि।
[2]भव हि विगतसंशया मयि त्वं नरवरपार्श्वगता विनीतशोका॥

---

1 'भद्र' इति नास्ति   2 भवति; भवसि

---

[69] SĪTĀ—Indeed, is it only a dream seen by me? Good sir, is it true? I know not.

[70] HANŪMĀN—(*To himself*) Alas!

[71] This lady,—so full of love for her lord,—being oppressed by grief, does not believe it even after knowing her husband quite well, as if she has migrated into another body.

[72] (*Aloud*) Worthy lady, now—

[73] I will bring here your lord with the upraised mighty bow and arrows in his hand. O princess! you will be

---

[69] ಸೀತೆ—ಇದೇನು ನಾನು ಕಾಣುತ್ತಿರುವುದು ಸ್ವಪ್ನವೇ? ಭದ್ರ, ಇದು ನಿಜವೇ? ನಾನರಿಯೆ.

[70] ಹನೂಮಾನ್—(ಸ್ವಗತ) ಓಃ! ಕಷ್ಟ.

[71] ಭರ್ತೃವತ್ಸಲೆ(ಯಾದ ಈ ಸೀತೆ) ತನ್ನ ಗಂಡನನ್ನು ಇಷ್ಟು ಚೆನ್ನಾಗಿ ತಿಳಿದೂ ಶೋಕಾರ್ತಳಾಗಿ ಬೇರೊಂದು ದೇಹದೊಳಕ್ಕೆ ಸೇರಿಕೊಂಡವಳಂತೆ (ನನ್ನ ಮಾತನ್ನು) ನಂಬುವುದೇ ಇಲ್ಲ. [೨೪]

[72] (ಪ್ರಕಾಶ) ಪೂಜ್ಯಳೇ, ನಾನೀಗ

[73] ಶ್ರೇಷ್ಠವಾದ (ತನ್ನ) ಧನುಃಬಾಣಗಳನ್ನು ಕೈಯಲ್ಲಿ ಹಿಡಿದ ನಿನ್ನ ಪತಿಯನ್ನಿಲ್ಲಿಗೆ ಕರೆತರುತ್ತೇನೆ. ಎಲೈ ರಾಜಕುಮಾರಿ! ನನ್ನಲ್ಲಿ ಸಂಶಯ

74 सीता—भद्र ! एतां मेऽवस्थां श्रुत्वार्यपुत्रो यथा शोकपरवशो न भवति, तथा मे वृत्तान्तं भण । [भद्द ! एदं मे अवत्थं सुणिअ अय्यउत्तो जह सोअपरवसो ण होइ, तह मे वुत्तन्तं भणेहि । ]

75 हनूमान् — यदाज्ञापयति भवती ।

76 सीता—गच्छ, कार्यसिद्धिर्भवतु । [गच्छ, कय्यसिद्धी होदु ।]

77 हनूमान् — अनुगृहीतोऽस्मि । ( परिक्रम्य ) कथमिदानीं ममागमनं रावणाय निवेदयामि ? भवतु, दृष्टम् ।

---

freed of doubts relating to me, once you are by the side of that great person, your sorrow being appeased. [25]

74 SĪTĀ—Good sir, relate my news in such a manner that my lord may not be oppressed by grief on hearing this plight of mine.

75 HANŪMĀN—As your ladyship commands.

76 SĪTĀ — Go; may there be success in your undertaking.

77 HANŪMĀN—I am favoured. *(Moving about)* Now, how shall I communicate my arrival to Rāvaṇa? Well, I see!

---

ಬಿಡು. ನೀನು ಶೋಕ ಕಳೆದು (ಆ) ಪುರುಷಶ್ರೇಷ್ಠನ ಪಕ್ಕದಲ್ಲಿ (ಇನ್ನೇನು) ಇದ್ದಂತೆಯೇ! [೨೫]

74 ಸೀತೆ—ಭದ್ರ! ನನ್ನೀ ಅವಸ್ಥೆಯನ್ನು ಕೇಳಿ ಆರ್ಯಪುತ್ರನು ಶೋಕಪರವಶನಾಗದ ರೀತಿಯಲ್ಲಿ ನನ್ನ ವೃತ್ತಾಂತವನ್ನವನಿಗೆ ಹೇಳು.

75 ಹನೂಮಾನ್—ಪೂಜ್ಯಳ ಅಪ್ಪಣೆಯಂತೆ.

76 ಸೀತೆ—ಹೋಗು; ಕಾರ್ಯ ಸಿದ್ಧಿಯಾಗಲಿ.

77 ಹನೂಮಾನ್—ಅನುಗೃಹೀತನಾದೆ. (ಮುಂದೆ ಹೋಗಿ) ನನ್ನ ಆಗಮನವನ್ನು ಈಗ ರಾವಣನಿಗೆ ಹೇಗೆ ತಿಳಿಸಲಿ? ಒಳ್ಳೆಯದು; ತಿಳಿಯಿತು.

[78] परभृत-गणजुष्टं पद्मषण्डाभिरामं
सुरुचिर-तरुषण्डं तोयदाभं त्रिकूटम् ।
कर-चरण-विमर्दैः काननं चूर्णयित्वा
विगत-विषय-दर्पं राक्षसेशं करोमि ॥२६॥

(इति निष्क्रान्तौ)

इति द्वितीयोऽङ्कः

---

[78] I shall rid the demon-king of his pride of a beautiful country by pulverizing with blows from my hands and feet this garden full of flocks of cuckoos, lovely with lotus beds, with very beautiful groves of trees, and with its three peaks resembling clouds. [26]

*( Exeunt ambo )*

**END OF THE SECOND ACT**

---

[78] ಕೋಗಿಲೆಗಳ ಹಿಂಡಿನಿಂದ ಕೂಡಿಯೂ ಕಮಲ ವನಗಳಿಂದ ಸುಂದರ ವಾಗಿಯೂ ಮನೋಹರವಾದ ಮರಗಳ ತೋಪುಗಳುಳ್ಳದ್ದಾಗಿಯೂ ಮೋಡ ಗಳನ್ನು ಹೋಲುವ ಮೂರು ಶಿಖರಗಳಿಂದ ಕೂಡಿಯೂ ಇರುವ ಈ ವನವನ್ನು ನನ್ನ ಕೈಕಾಲುಗಳ ಹೊಡೆತದಿಂದ ಪುಡಿಪುಡಿಮಾಡಿ, (ಸುಂದರವಾದ) ದೇಶವನ್ನು ಹೊಂದಿದ್ದೇನೆಂಬ ಗರ್ವವನ್ನು ರಾಕ್ಷಸೇಶ್ವರನು ನೀಗುವಂತೆ ಮಾಡುತ್ತೇನೆ.

(ಇಬ್ಬರೂ ಹೋಗುತ್ತಾರೆ)

ಇಂತು ಎರಡನೆಯ ಅಂಕ

## अथ तृतीयोऽङ्कः

(ततः प्रविशति शङ्कुकर्णः)

[2] शङ्कुकर्णः—क इह भोः ! काञ्चनतोरणद्वारमशून्यं कुरुते ?

[3] (प्रविश्य) प्रतीहारी—आर्य ! अहं विजया । किं क्रियताम् ?

[अय्य ! अहं विजआ। किं करीअदु ?]

[4] शङ्कुकर्णः—विजये, निवेद्यतां निवेद्यतां महाराजाय लङ्केश्वराय—'भग्नप्रायाशोकवनिका' इति । कुतः,

---

## ACT III

*(Then enters S'aṅkukarṇa)*

[2] S'AṄKUKARṆA—Hullo, who is here on duty at the 'Golden Gate Entrance'?

[3] *(Entering)* PORTRESS—Sir, it is I, Vijayā. What shall I do for you?

[4] S'AṄKUKARṆA—O Vijaya, convey, convey to His Majesty the lord of Laṅkā that the As'oka garden is almost destroyed. For,

---

## ಮೂರನೆಯ ಅಂಕ

(ಬಳಿಕ ಶಂಕುಕರ್ಣ ಪ್ರವೇಶಿಸುತ್ತಾನೆ)

[2] ಶಂಕುಕರ್ಣ—ಎಲೌ, ಈ ಕಾಂಚನ-ತೋರಣ-ದ್ವಾರವನ್ನೆಂದೂ ಶೂನ್ಯವಾಗಿಸದವರು ಯಾರು ?

[3] (ಪ್ರವೇಶಿಸಿ) ಪ್ರತೀಹಾರೀ—ಆರ್ಯ, ನಾನು ವಿಜಯೆ. ಏನಾಗಬೇಕು?

[4] ಶಂಕುಕರ್ಣ—ವಿಜಯೆ, ಅರಿಕೆಮಾಡು ; ಮಹಾರಾಜ ಲಂಕೇಶ್ವರನಿಗೆ ಅರಿಕೆಮಾಡು — 'ಸುಂದರವಾದ ಅಶೋಕವನ ಭಗ್ನವಾಗಿಹೋದಂತೆಯೆ' ಎಂದು. ಯಾಕೆಂದರೆ—

5 यस्यां न प्रियमण्डनापि महिषी देवस्य मण्डोदरी
स्नेहाल्लुम्पति पल्लवान्न च पुनर्वीजन्ति यस्यां भयात् ।
वीजन्तो मलयानिला अपि करैरस्पृष्टबालद्रुमा
सेयं शक्ररिपोरशोकवनिका भग्नेति विज्ञाप्यताम् ॥१॥

6 प्रतीहारी—आर्य ! नित्यं भर्तृपादमूले वर्तमानस्य जनस्यादृष्टपूर्वोऽयं संभ्रमः । किमेतत् ? [अय्य ! णिच्चं भट्टिपादमूले वत्तमाणस्स जणस्स अदिट्ठपुरुवो अअं संभमो । किं एदं ?]

7 शङ्कुकर्णः—भवति ! अतिपाति कार्यमिदम् ? शीघ्रं निवेद्यतां, निवेद्यताम् ।

---

5 That As'oka garden,—where even Mandodari, our lord's chief queen, although fond of ornaments does not pluck the sprays out of kindness; wherein even the Malaya breezes do not blow out of fear; and whose plants are untouched by the hand;—that garden of Indra's foe is destroyed. Let the matter be reported. [1]

6 PORTRESS—Sir, by a person who is always in attendance on the king, such fright was never seen before. How came this?

7 S'AṄKUKARṆA—Lady, this is an urgent matter. Please convey (it) at once.

---

5 ಮಹಾರಾಜನ ಪಟ್ಟದ ರಾಣಿಯಾದ ಮಂಡೋದರಿ ಅಲಂಕಾರ ಪ್ರಿಯಳಾಗಿದ್ದರೂ ಸ್ನೇಹದಿಂದ ಯಾವ ವನದ ಚಿಗುರುಗಳನ್ನು ಕೊಯ್ಯು ವುದಿಲ್ಲವೋ, (ಹೊರಗಡೆ) ಬೀಸುತ್ತಿರುವ ಮಲಯ ಮಾರುತಗಳೂ ಭಯ ದಿಂದ ಯಾವ ವನದೊಳಗೆ ಬೀಸುವುದಿಲ್ಲವೊ, ಅಂತಹ ಎಂದೂ ಕೈ ಸೋಕದ ಗಿಡಗಳುಳ್ಳ ಇಂದ್ರಜಿತ್ತಿನ ಈ ಸುಂದರವಾದ ಅಶೋಕವನ ನಾಶಗೊಳಿಸ ಲ್ಪಟ್ಟದೆಯೆಂದು ಅರಿಕೆಮಾಡಲ್ಪಡಲಿ. [೧]

6 ಪ್ರತೀಹಾರೀ—ಆರ್ಯ, ನಿತ್ಯವೂ ಒಡೆಯನ ಪಾದದಮೂಲದಲ್ಲಿರುವ ನಾನು ಹಿಂದೆಂದೂ ಕಂಡರಿಯದ ಭೀತಿ ಇದು. ಇದು ಹೇಗಾಯಿತು ?

7 ಶಂಕುಕರ್ಣ—ಪೂಜ್ಯಳೇ, ಅತಿ ಮುಖ್ಯವಾದ ಕೆಲಸ ಇದು. ಬೇಗ ಅರಿಕೆಮಾಡು.

Funding: Tattva Heritage Foundation,Kolkata. Digitization: eGangotri.



[8] प्रतीहारी—आर्य ! इयं निवेदयामि ।
[अय्य ! इयं णिवेदेमि ।] (निष्क्रान्ता)

[9] शङ्कुकर्णः — (पुरतो विलोक्य) अये ! अयं महाराजो लङ्केश्वर इत एवाभिवर्तते । य एषः,

[10] अमल-कमल-सन्निभोग्र-नेत्रः
कनकमयोज्ज्वल-दीपिका-पुरोगः ।
त्वरितमभिपतत्यसौ सरोषो
युगपरिणाम-समुद्यतो यथार्कः ॥२॥

[11] ( ततः प्रविशति यथानिर्दिष्टो रावणः )

---

[8] PORTRESS—Sir, here I convey. *(Exit)*

[9] SAṄKUKARṆA—*(Looking in front)* Lo! Here is His Majesty the lord of Laṅkā coming this very way. And he,

[10] With eyes wild and resembling white lotuses, with blazing golden torches going in his front, full of fury, (he) is rushing forward in haste like the Sun engaged in ending an Age *(yuga)*. [2]

[11] *(Then enters Rāvaṇa, as described)*

---

[8] ಪ್ರತೀಹಾರೀ—ಆರ್ಯ, ಇಗೋ ಅರಿಕೆಮಾಡುತ್ತೇನೆ. (ಹೋಗುತ್ತಾಳೆ)

[9] ಶಂಕುಕರ್ಣ—(ಇದಿರುಗಡೆ ನೋಡಿ) ಓ, ಇಗೋ ಮಹಾರಾಜ ಲಂಕೇಶ್ವರ ಇತ್ತ ಕಡೆಯೇ ಬರುತ್ತಿದ್ದಾನೆ. ಇವನಾದರೋ—

[10] ಶುಭ್ರವಾದ ( ಕೆಂಪು ) ತಾವರೆಯಂತೆ ಉಗ್ರವಾದ ನೇತ್ರಗಳುಳ್ಳವನು; ತನ್ನ ಮುಂಭಾಗದಲ್ಲಿ ಹೋಗುತ್ತಿರುವ, ಚಿನ್ನದಿಂದ ಮಾಡಿದ ಮತ್ತು ಉಜ್ಜ್ವಲವಾಗಿ ಉರಿಯುತ್ತಿರುವ ದೀವಟಿಗೆಗಳುಳ್ಳವನು. ಯುಗದ ಕೊನೆಯಲ್ಲಿ ಉದಯಿಸಿದ ಸೂರ್ಯನಂತೆ ಕೋಪದಿಂದ ಕೂಡಿದ ಇವನು ಬೇಗ ಬೇಗ ಈ ಕಡೆಯೇ ಬರುತ್ತಿದ್ದಾನೆ. [೨]

[11] ( ಬಳಿಕ ಮೇಲೆ ನಿರ್ದೇಶಿಸಿದಂತೆ ರಾವಣನು ಪ್ರವೇಶಿಸುತ್ತಾನೆ)

[12] रावणः—कथं कथं भो नववाक्यवादिन्
शृणोमि शीघ्रं वद केन चाद्य ।
मुमूर्षुणा मुक्तभयेन धृष्टं
वनाभिमर्दात् परिधर्षितोऽहम् ॥३॥

[13] शङ्कुकर्णः— (उपसृत्य) जयतु महाराजः ! अविदितागमनेन केन चिद्वानरेण ससंरम्भमभिमृदिताशोकवनिका ।

[14] रावणः — ( सावज्ञम् ) कथं वानरेणेति ? गच्छ, शीघ्रं निगृह्यानय ।

---

[12] RĀVAṆA—Hullo, speaker of new words! I am listening. Speak out at once. How and by which fearless fellow courting death have I been rudely abused by destroying the park ? [3]

[13] SAṄKUKARṆA—*(Going near)* Victory to the great king ! By a strange monkey that came in unnoticed, the As'oka garden has been violently crushed.

[14] RĀVAṆA—*(With contempt)* How, by a monkey, is it ? Go ; having caught hold of him at once, bring him.

---

[12] ರಾವಣ—ಎಲೈ ಹೊಸ ವಾಕ್ಯವನ್ನು ನುಡಿಯುತ್ತಿರುವವನೆ! ಆಲಿಸುತ್ತಿದ್ದೇನೆ. ಬೇಗ ಹೇಳು. (ಅಶೋಕ) ವನವನ್ನು ಧಾರ್ಷ್ಟ್ಯದಿಂದ ನಾಶಪಡಿಸುವುದರ ಮೂಲಕ ಸಾವನ್ನಪ್ಪುತ್ತಿರುವ ಭಯರಹಿತನಾದ ಯಾವನಿಂದ ನಾನು ಅಪಮಾನಿತನಾಗಿದ್ದೇನೆ ? [೩]

[13] ಶಂಕುಕರ್ಣ—(ಹತ್ತಿರಕ್ಕೆ ಹೋಗಿ) ಮಹಾರಾಜನಿಗೆ ಜಯವಾಗಲಿ! ಯಾರಿಗೂ ಗೋಚರವಾಗದಂತೆ ಬಂದಿರುವ ಯಾವುದೋ ಕೋತಿಯೊಂದರಿಂದ ಸುಂದರವಾದ ಅಶೋಕವನ ಒರಟುತನದಿಂದ ಮರ್ದಿಸಲ್ಪಟ್ಟಿದೆ.

[14] ರಾವಣ—(ತಿರಸ್ಕಾರದಿಂದ) ಏನು ? 'ಕೋತಿಯಿಂದ'—ಎಂದೆಯಾ ? ಹೋಗು ; ಅದನ್ನು ಬೇಗ ಹಿಡಿದು ತಾ.

15 शङ्कुकर्णः—यदाज्ञापयति महाराजः । (निष्क्रान्तः)

16 रावणः—भवतु भवतु ।

17 युधि जगत्त्रयभीतिकृतोऽपि मे यदि कृतं त्रिदशैरिदमप्रियम् ।
अनुभवन्त्वचिरादमृताशिनः फलमतो निजशाठ्यसमुद्भवम् ॥ 4

18 (प्रविश्य) शङ्कुकर्णः—जयतु महाराजः । महाराज ! महाबलः खलु स वानरः । तेन खलु मृणालवदुत्पाटिताः सालवृक्षाः, मुष्टिना भग्नो दारुपर्वतकः, पाणितलाभ्याममिमृदितानि लतागृहाणि, नादेनैव

---

15 SAṄKUKARṆA—As the great king commands! (*Exit*)

16 RĀVAṆA—Well, Well;

17 If this disagreeable thing has been done by the gods to me, the creator of terror to the three worlds in battle, then, let those nectar-eaters soon reap the fruit arising from their insolence. [4]

18 (*Entering*) SAṄKUKARṆA—Victory to the great king! Sir, that monkey is indeed very strong. By him the Sāla trees were pulled out like lotus-stalks, the wooden hillock was smashed with his fist, the creeper-houses were squeezed by the palm of his hands, and the guards of the pleasure

---

15 ಶಂಕುಕರ್ಣ—ಮಹಾರಾಜನ ಅಪ್ಪಣೆಯಂತೆ. (ಹೋಗುತ್ತಾನೆ)

16 ರಾವಣ—ಇರಲಿ, ಇರಲಿ.

17 ಯುದ್ಧದಲ್ಲಿ ಮೂರು ಲೋಕಗಳಿಗೂ ಭಯಂಕರನಾದ ನನಗೆ ದೇವತೆಗಳಿಂದ ಈ ಅಪ್ರಿಯವೆಸಗಲ್ಪಟ್ಟಿದ್ದರೆ, ಅಮೃತವುಂಡಿರುವ ಅವರೂ ಅದೇ ಕಾರಣದಿಂದ ತಮ್ಮ ಶಾಠ್ಯದಿಂದುದ್ಭವಿಸುವ ಫಲವನ್ನು ಬೇಗನೆ ಅನುಭವಿಸಲಿ. [೪]

18 (ಪ್ರವೇಶಿಸಿ) ಶಂಕುಕರ್ಣ—ಮಹಾರಾಜನಿಗೆ ಜಯವಾಗಲಿ! ಮಹಾರಾಜ, ಆ ವಾನರ ಮಹಾಬಲಶಾಲಿ. ಅವನಿಂದ ಸಾಲವೃಕ್ಷಗಳು ತಾವರೆ ದಂಟಿನಂತೆ ಕೀಳಲ್ಪಟ್ಟುವು; ದಾರುಪರ್ವತಕ ಗುದ್ದಿನೇಟನಿಂದ ಭಗ್ನವಾ

विसंज्ञीकृताः प्रमदवनपालाः । तस्य ग्रहणसमर्थं बलमाज्ञापयितुमर्हति महाराजः ।

[19] रावणः—[1]तेन हि किङ्कराणां सहस्रं बलमाज्ञापय वानरग्रहणाय ।

[20] शङ्कुकर्णः— यदाज्ञापयति महाराजः । ( निष्क्रम्य, प्रविश्य ) जयतु महाराजः !

[21] अस्मदीयैर्महावृक्षैरस्मदीया महाबलाः ।
क्षिप्रमेव हतास्तेन किङ्करा द्रुमयोधिना ॥५॥

---

[1] तेन हि अस्ति तु किङ्क०

---

garden were rendered unconscious with a mere roar. Your Majesty will be pleased to order a force capable of capturing him.

[19] RĀVAṆA—Then, order the 'Thousand slaves' force' to captivate the monkey.

[20] S'AṄKUKARṆA—As the great king commands. *( Exit, re-enter )* Victory to the great king!

[21] Our slaves of great strength were killed in no time with our own great trees by that tree-weaponed fighter. [5]

---

ಹೋಯಿತು; ಲತಾಗೃಹಗಳು ಅಂಗೈಗಳಿಂದ ಹಿಸುಕಿಹಾಕಲ್ಪಟ್ಟುವು; ಪ್ರಮದ ವನದ ಪಾಲಕರು ಬರಿಯ ಘರ್ಜನೆಯಿಂದಲೇ ಪ್ರಜ್ಞಾಶೂನ್ಯರಾಗಿ ಮಾಡ ಲ್ಪಟ್ಟರು. ಅವನನ್ನು ಹಿಡಿಯಲು ಸಮರ್ಥವಾದ ಸೈನ್ಯಕ್ಕೆ ಮಹಾರಾಜನು ಅಪ್ಪಣೆಮಾಡಬೇಕು.

[19] ರಾವಣ—ಹಾಗಾದರೆ ಆ ವಾನರನನ್ನು ಹಿಡಿಯಲು ಸಾವಿರ ಕಿಂಕರರ ಸೈನ್ಯಕ್ಕೆ ಅಪ್ಪಣೆಮಾಡು.

[20] ಶಂಕುಕರ್ಣ—ಮಹಾರಾಜನ ಅಪ್ಪಣೆಯಂತೆ. ( ಹೊರಕ್ಕೆ ಹೋಗಿ, ಪುನಃ ಪ್ರವೇಶಿಸಿ) ಮಹಾರಾಜನಿಗೆ ಜಯವಾಗಲಿ!

[21] ಮರಗಳನ್ನೇ ಎತ್ತಿಕೊಂಡು ಯುದ್ಧಮಾಡುವ ಆ ವಾನರನಿಂದ ಮಹಾಬಲಶಾಲಿಗಳಾದ ನಮ್ಮ ಕಿಂಕರರು ನಮ್ಮ ಮಹಾವೃಕ್ಷಗಳಿಂದಲೇ ಬಲು ಬೇಗ ಕೊಲ್ಲಲ್ಪಟ್ಟರು. [೫]

22 रावणः — कथं हता इति ? तेन हि कुमारमक्षमाज्ञापय वानरग्रहणाय ।

23 शङ्कुकर्णः—यदाज्ञापयति महाराजः । (निष्क्रान्तः)

24 रावणः—(विचिन्त्य)

कुमारो हि कृतास्त्रश्च शूरश्च बलवानपि ।
प्रसह्य चापि गृह्णीयाद्धन्याद्वा तं वनौकसम् ॥६॥

25 (प्रविश्य) शङ्कुकर्णः — [1]अनन्तरीयं बलमाज्ञापयितुमर्हति महाराजः ।

[1] आनन्तर्य

26 रावणः—किमर्थम् ?

---

22 RĀVAṆA—How? Killed, you say? Then, bid prince Akṣa to capture the monkey.

23 S'AṄKUKARṆA—As the great king commands. (*Exit*)

24 RĀVAṆA—(*Reflecting*) As the prince is well versed in weapons, heroic and strong, he may either catch the monkey by force, or even slay him. [6]

25 (*Entering*) S'AṄKUKARṆA—Your majesty will be pleased to order the next force.

26 RĀVAṆA—Why?

---

22 ರಾವಣ—ಏನು? ಕೊಲ್ಲಲ್ಪಟ್ಟರು ಎಂದೆಯಾ? ಹಾಗಾದರೆ ವಾನರನನ್ನು ಹಿಡಿಯಲು ಕುಮಾರ ಅಕ್ಷನಿಗೆ ಅಜ್ಞಾಪಿಸು.

23 ಶಂಕುಕರ್ಣ—ಮಹಾರಾಜನ ಅಪ್ಪಣೆಯಂತೆ. (ಹೋಗುತ್ತಾನೆ)

24 ರಾವಣ—(ಆಲೋಚಿಸಿ) ಕುಮಾರನೇನೋ ಅಸ್ತ್ರವಿದ್ಯಾನಿಪುಣ, ಶೂರ, ಬಲಶಾಲಿ. ಆ ವಾನರನನ್ನವನು ನಿರ್ಬಂಧದಿಂದ ಸೆರೆಹಿಡಿಯಲೇ ಬಹುದು; ಅಥವಾ ಕೊಲ್ಲಲಾದರೂ ಬಹುದು. [6]

25 (ಪ್ರವೇಶಿಸಿ) ಶಂಕುಕರ್ಣ—ಮಹಾರಾಜನು ಮುಂದಿನ ಸೈನ್ಯಕ್ಕೆ ಅಪ್ಪಣೆ ಮಾಡಬೇಕು.

26 ರಾವಣ—ಏಕೆ?

27 शङ्कुकर्णः—श्रोतुमर्हति महराजः । कुमारं वानरमभिगच्छन्तं दृष्ट्वा महाराजेनानाज्ञापिता अप्यनुगताः पञ्चसेनापतयः ।

28 रावणः—ततस्ततः ?

29 शङ्कुकर्णः — ततस्तानभिद्रुतान् दृष्ट्वा किञ्चिद्भीत इव तोरणम् आश्रित्य काञ्चनपरिघमुद्यम्य निपातितास्तेन हरिणा पञ्चसेनापतयः ।

30 रावणः—ततस्ततः ?

31 शङ्कुकर्णः—ततः कुमारमक्षं

---

27 S'AṄKUKARṆA—Pray, listen, my liege. Seeing the prince going out ( to attack the monkey ), five generals, even without orders from your majesty, followed him.

28 RĀVAṆA—Then ?

29 S'AṄKUKARṆA—Then the monkey, seeing them rushing towards him, retired to the gate as if scared, raised the golden bar and felled all the five generals.

30 RĀVAṆA—Then, then ?

31 S'AṄKUKARṆA—Then, prince Akṣa,—

---

27 ಶಂಕುಕರ್ಣ—ಮಹಾರಾಜನು ಆಲಿಸಬೇಕು. ಕುಮಾರನು ವಾನರನ ಮೇಲೇರಿ ಹೋಗುತ್ತಿರುವುದನ್ನು ಕಂಡು ಮಹಾರಾಜನಿಂದ ಆಜ್ಞಪ್ತರಾಗಿಲ್ಲದಿದ್ದರೂ ಐದು ಸೇನಾಪತಿಗಳೂ ಅವನನ್ನು ಹಿಂಬಾಲಿಸಿ ಹೋದರು.

28 ರಾವಣ—ಆಮೇಲೆ ?

29 ಶಂಕುಕರ್ಣ—ಆಮೇಲೆ, ಎದುರಿಸಿ ಬರುತ್ತಿರುವ ಅವರನ್ನು ಕಂಡು ಆ ವಾನರನು ಸ್ವಲ್ಪ ಹೆದರಿದವನಂತೆ ತೋರಣದ್ವಾರಕ್ಕೆ ಹೋಗಿ ಅಲ್ಲಿನ ಕಾಂಚನ ಪರಿಘವನ್ನೆತ್ತಿ ಐದು ಸೇನಾಪತಿಗಳನ್ನೂ ಕೊಂದುಬಿಟ್ಟನು.

30 ರಾವಣ—ಆಮೇಲೆ ?

31 ಶಂಕುಕರ್ಣ—ಆಮೇಲೆ ಅಕ್ಷಕುಮಾರನನ್ನು

32 क्रोधात्[1] संरक्तनेत्रं त्वरिततरहयं स्यन्दनं वाहयन्तं,
प्रावृट्कालाभ्रकल्पं परमलघुतरं बाणजालान् वमन्तम् ।
तान् बाणान् निर्विधून्वन् कपिरपि सहसा तद्रथं लङ्घयित्वा
कण्ठे संगृह्य धृष्टं मुदिततरमुखो मुष्टिना निर्जघान ॥७॥

33 रावणः—( सरोषम् [2]) आः कथं कथं निर्जघानेति ?

34 तिष्ठ त्वमहमेवैनमासाद्य [3]कपिजन्तुकम् ।
एष भस्मीकरोम्यस्मत्क्रोधानलकणैः क्षणात् ॥८॥

---

[1] रोषात् [2] (सक्रोधम् ) तिष्ठ.... [3] कपिकीटकम्

---

32 His eyes red with rage, was driving his chariot yoked with very swift horses and was pouring out networks of arrows with the greatest ease like the clouds of the rainy season; the monkey too blowing off those arrows, straightway leaping into that chariot (of Akṣa) and seizing him rudely by the throat, killed him with his fist, grinning with great joy. [7]

33 RĀVAṆA—( *Angrily* ) Ah ! killed him ?

34 You stay here; I myself will go for this insignificant

---

32 ಕೋಪದಿಂದ ಕೆಂಪಾದ ಕಣ್ಣುಗಳುಳ್ಳ, ತುಂಬ ವೇಗವಾದ ಕುದುರೆ ಹೂಡಿದ ರಥವನ್ನು ನಡೆಸುತ್ತಿದ್ದ, ಮಳೆಗಾಲದ ಮೋಡದಂತಿದ್ದ, ಅತ್ಯಂತ ಲಘುವಾಗಿ ಬಾಣಗಳ ಜಾಲಗಳನ್ನೇ ಹೊರಗೆ ಹಾಯಿಸುತ್ತಿದ್ದ (ಆ ಅಕ್ಷ) ಕುಮಾರನನ್ನು, ವಾನರನೂ ಕೂಡ ಆ ಬಾಣಗಳನ್ನು ಪಕ್ಕಗಳಿಗೆ ಸರಿಯಿಸಿ ಆ ರಥದೊಳಕ್ಕೆ ಇದ್ದಕ್ಕಿದ್ದಂತೆ ಹಾರಿ, ಒರಟೊರಟಾಗಿ ಕುತ್ತಿಗೆಯಲ್ಲಿ ಹಿಡಿದು, ತುಂಬ ಸಂತೋಷಗೊಂಡ ಮುಖವುಳ್ಳವನಾಗಿ, ಗುದ್ದಿ ಸಾಯಿಸಿಬಿಟ್ಟನು. [೭]

33 ರಾವಣ—(ಕೋಪದಿಂದ) ಆಃ, ಏನು ಸಾಯಿಸಿಬಿಟ್ಟನೇ ?

34 ನೀನು ಇರು. ನಾನೇ ಹೋಗಿ ತುಚ್ಛ ಜಂತುವಾದ ಈ ಕಪಿಯನ್ನು

[35] शङ्कुकर्णः— प्रसीदतु प्रसीदतु महाराजः ! कुमारमक्षं निहतं श्रुत्वा क्रोधाविष्टहृदयः [1]कुमारेन्द्रजिदभिगतवास्तं वनौकसम् ।

[36] रावणः—तेन हि गच्छ । भूयो ज्ञायतां वृत्तान्तः ।

[37] शङ्कुकर्णः— यदाज्ञापयति महाराजः । (निष्कान्तः)

[38] रावणः—कुमारो हि कृतास्त्रश्च,

[39] अवश्यं युधि वीराणां वधो वा विजयोऽथवा ।
तथापि क्षुद्रकर्मेदं मह्यमीपन्मनोज्वरः[2] ॥९॥

---

[1] कुमार इन्द्रजिद्

[2] 'मह्यमीषां मनोज्वरः' इति गणपतिशास्त्रिणो मूलमातृकायां वर्तते ।

---

monkey and in no time reduce him to ashes with the sparks of the fire of my anger. [8]

[35] S'AÑKUKARṆA — Be pleased, be pleased your Majesty ! Hearing that prince Akṣa was slain, prince Indrajit, his heart full of anger, went to attack the monkey.

[36] RĀVAṆA—Then go; get further news.

[37] S'AÑKUKARṆA—As the great king commands. *(Exit)*

[38] RĀVAṆA--Verily, the prince is well trained in weapons and [39] Necessarily, in battle there must be either death or

---

ಇಗೋ ಒಂದೇ ಕ್ಷಣದಲ್ಲಿ ನನ್ನ ಕೋಪಾಗ್ನಿಯ ಕಿಡಿಗಳಿಂದ ಭಸ್ಮಮಾಡಿ ಬಿಡುತ್ತೇನೆ. [೮]

[35] ಶಂಕುಕರ್ಣ—ಮಹಾರಾಜನು ಪ್ರಸನ್ನನಾಗಬೇಕು. ಅಕ್ಷಕುಮಾರನು ನಿಹತನಾದನೆಂದು ಕೇಳಿ ಕೋಪದಿಂದ ಆವೇಶಗೊಂಡ ಹೃದಯವುಳ್ಳವನಾಗಿ ಕುಮಾರ ಇಂದ್ರಜಿತನು ಆ ಕಪಿಯ ಮೇಲೇರಿ ಹೋಗಿದ್ದಾನೆ.

[36] ರಾವಣ—ಹಾಗಾದರೆ ಹೋಗು. ಮುಂದಿನ ವೃತ್ತಾಂತ ತಿಳಿ.

[37] ಶಂಕುಕರ್ಣ—ಮಹಾರಾಜನ ಅಪ್ಪಣೆಯಂತೆ. (ಹೋಗುತ್ತಾನೆ)

[38] ರಾವಣ—ಕುಮಾರನೇನೋ ಅಸ್ತ್ರವಿದ್ಯೆಯಲ್ಲಿ ನುರಿತವನು.

[39] ಯುದ್ಧದಲ್ಲಿ ವೀರರಿಗೆ ಅವಶ್ಯವಾಗಿಯೂ ವಧೆಯೋ ಅಥವಾ ವಿಜ

40 (प्रविश्य) शङ्कुकर्णः — जयतु महाराजः ! जयतु लङ्केश्वरः ! जयतु भद्रमुखः !

41 संवृत्तं तुमुलं युद्धं कुमारस्य च तस्य च ।
ततः स वानरः शीघ्रं बद्धः पाशेन सांप्रतम् ॥१०॥

42 रावणः — कोऽत्र विस्मय इन्द्रजिता शाखामृगो बद्ध इति ! कोऽत्र भोः !

43 (प्रविश्य) राक्षसः—जयतु महाराजः !

---

victory to the heroes. Yet, this creature of vile deed is of some mental worry to me. [9]

40 *(Entering)* S'AṄKUKARṆA — Victory to the great king ! Victory to the lord of Laṅkā ! Victory to the king with a blessed face !

41 There came up a tumultuous fight between him and the prince. There-after, the monkey was swiftly bound down with ropes, befittingly. [10]

42 RĀVAṆA — What wonder in this that a monkey has been caught by Indra's conqueror ! Hullo, who is there ?

43 *(Entering)* DEMON—Victory to the great king !

---

ಯವೋ ಇದ್ದೇ ಇರುತ್ತದೆ. ಆದರೂ ಈ ಕ್ಷುದ್ರ ಕರ್ಮದ ಜಂತುವು ನನಗೆ ಸ್ವಲ್ಪ ಮನೋಜ್ವರವುಂಟುಮಾಡುತ್ತಿದೆ. [೯]

40 (ಪ್ರವೇಶಿಸಿ) ಶಂಕುಕರ್ಣ—ಮಹಾರಾಜನಿಗೆ ಜಯವಾಗಲಿ! ಲಂಕೇಶ್ವರನಿಗೆ ಜಯವಾಗಲಿ! ಭದ್ರಮುಖನಿಗೆ ಜಯವಾಗಲಿ!

41 ಕುಮಾರನಿಗೂ ಅವನಿಗೂ ತುಮುಲ ಯುದ್ಧ ನಡೆಯಿತು. ಬಳಿಕ ಬೇಗ ಆ ವಾನರನು ಯೋಗ್ಯರೀತಿಯಲ್ಲಿ ಪಾಶದಿಂದ ಬಂಧಿತನಾದ. [೧೦]

42 ರಾವಣ—ಇಂದ್ರನನ್ನೇ ಜಯಿಸಿದವನಿಂದ ಶಾಖಾಮೃಗ ಬಂಧಿತವಾಯಿತೆಂಬುದರಲ್ಲಿ ಆಶ್ಚರ್ಯವೇನು? ಯಾರಲ್ಲಿ?

43 (ಪ್ರವೇಶಿಸಿ) ರಾಕ್ಷಸ—ಮಹಾರಾಜನಿಗೆ ಜಯವಾಗಲಿ!

44 रावणः—गच्छ, विभीषणस्तावदाहूयताम् ।

45 राक्षसः — यदाज्ञापयति महाराजः । (निष्क्रान्तः)

46 रावणः—त्वमपि तावद्वानरमानय ।

47 शङ्कुकर्णः—यदाज्ञापयति महाराजः । (निष्क्रान्तः)

48 रावणः—(विचिन्त्य) भोः ! कष्टम् ।

49 अचिन्त्या मनसा लङ्का सहितैः सुरदानवैः ।
अभिभूय दशग्रीवं प्रविष्टः किल वानरः ॥११॥

50 अपि च,

---

44 RĀVAṆA—Go; let Vibhiṣaṇa be summoned.
45 DEMON—As the great king commands. *(Exit)*
46 RĀVAṆA—You too bring the monkey.
47 S'AṄKUKARṆA—As the great king commands.
48 RĀVAṆA—*(Reflecting)* Oh, alas !

49 Laṅkā cannot be thought of even mentally by gods and demons (although) united. Yet a monkey has indeed entered it defying the ten-necked (me). [11]

50 Moreover,—

---

44 ರಾವಣ—ಹೋಗು, ವಿಭೀಷಣನನ್ನು ಕರೆದುಕೊಂಡು ಬಾ.
45 ರಾಕ್ಷಸ—ಮಹಾರಾಜನ ಅಪ್ಪಣೆಯಂತೆ. (ಹೋಗುತ್ತಾನೆ)
46 ರಾವಣ—ನೀನೂ (ಆ) ವಾನರನನ್ನು ಕರೆದುಕೊಂಡು ಬಾ.
47 ಶಂಕುಕರ್ಣ—ಮಹಾರಾಜನ ಅಪ್ಪಣೆಯಂತೆ. (ಹೋಗುತ್ತಾನೆ)
48 ರಾವಣ—(ಆಲೋಚಿಸಿ) ಓಃ ಕಷ್ಟ!

49 ಒಟ್ಟುಗೂಡಿದ ದೇವದಾನವರಿಗೂ ಲಂಕೆಯನ್ನು ಕುರಿತು ಮನಸ್ಸಿನೊಳಗೇ ಯೋಚಿಸಲೂ ಸಾಧ್ಯವಿಲ್ಲ. (ಆದರೂ) ದಶಕಂಠನಾದ ನನ್ನನ್ನು ನಿರ್ಲಕ್ಷಿಸಿ ವಾನರವು (ಲಂಕೆಯನ್ನು) ಪ್ರವೇಶಿಸಿಯೇ ಬಿಟ್ಟಿದೆಯಲ್ಲಾ! [೧೧]

50 ಮತ್ತು

Explaination, Important.

[51] जित्वा त्रैलोक्यमाजौ ससुरदनुसुतं यन्मया गर्वितेन
क्रान्त्वा कैलासमीशं स्वगणपरिवृतं साकमाकम्प्य देव्या ।
लब्ध्वा तस्मात् प्रसादं पुनरगसुतया नन्दिनानादृतत्वाद्
दत्तं शप्तं च ताभ्यां यदि कपिविकृतिच्छद्मना तन्मम स्यात् ॥

[52] (ततः प्रविशति विभीषणः)

[53] विभीषणः—([1]सविमर्शम्) अहो तु खलु महाराजस्य विपरीता खलु बुद्धिः संवृत्ता ! कुतः

---

[1] (सविस्मयम्) अहो महाराजस्य...

---

[51] After conquering the triple world with its gods and demons in battle and proceeding proudly to Kailāsa, I, having shaken S'iva together with his queen and surrounded by his gaṇas, obtained a boon from him; but again, a curse was laid on me by Pārvatī and Nandi as they were not paid any regard (by me) Could that (curse) be (operating now) on me, through the disguised form of a monkey ? [12]

[52] *(Then enters Vibhīṣaṇa)*

[53] VIBHIṢAṆA—*(Thoughtfully)* Alas ! how perverse indeed has the king's mind become ! For,

---

[51] ಸುರರಿಂದಲೂ ದನುಜರಿಂದಲೂ ಕೂಡಿದ ಮೂರು ಲೋಕಗಳನ್ನೂ ಯುದ್ಧದಲ್ಲಿ ಗೆದ್ದು ಗರ್ವಿತನಾದ ನಾನು ಕೈಲಾಸಕ್ಕೆ ಹೋಗಿ, ತನ್ನ ಗಣಗಳಿಂದ ಸುತ್ತುವರಿಯಲ್ಪಟ್ಟಿದ್ದ ಶಿವನನ್ನು ಪಾರ್ವತಿಯೊಡನೆ ಅಲ್ಲಾಡಿಸಿ, ಆ ಶಿವನಿಂದ ಅನುಗ್ರಹಪಡೆದೂ, ಪಾರ್ವತಿ ಮತ್ತು ನಂದಿ ಇಬ್ಬರಿಂದ—ಅವರನ್ನು ನಾನು ಆದರಿಸದೆ ಇದ್ದುದರಿಂದ—ಶಪಿಸಲ್ಪಟ್ಟೆ. ಆ ಶಾಪವೇನಾದರೂ ಕಪಿಯ ವಿಕೃತ ವೇಷದಿಂದ ನನ್ನ ಮೇಲೆರಗಿರಬಹುದೆ! [೧೨]

[52] (ಬಳಿಕ ವಿಭೀಷಣ ಪ್ರವೇಶಿಸುತ್ತಾನೆ)

[53] ವಿಭೀಷಣ—(ಆಲೋಚನಾಪರನಾಗಿ) ಮಹಾರಾಜನ ಬುದ್ಧಿ ತುಂಬ ವಿಪರ್ಯಸ್ತವಾಗಿಬಿಟ್ಟಿದೆಯಲ್ಲಾ! ಏಕೆಂದರೆ—

[54] सयोक्तो मैथिली तस्मै बहुशो दीयतामिति ।
[2] न मे शृणोति वचनं सुहृदां शोककारणात् ॥१३॥

[55] (उपेत्य) जयतु महाराजः ।

[56] रावणः—विभीषण ! एह्येहि । उपविश ।

[57] विभीषणः—एष एष उपविशामि । (उपविशति)

[58] रावणः—विभीषण ! निर्विण्णमिव त्वां लक्षये ।

[59] विभीषणः — निर्वेद एव खल्वनुक्तग्राहिणं स्वामिनमुपाश्रितस्य भृत्यजनस्य । → annotation

[2] शृणोति मे न वचनम्

[54] Many a time he has been asked by me to restore Maithili to him (i.e., Rāma). (But), he does not listen to my words for the misery of his friends. [13]

[55] *(Going near)* May the great king be victorious !

[56] RĀVAṆA—Vibhiṣaṇa, come near; sit down.

[57] VIBHĪṢAṆA—Yes, here I sit down. *(Sits)*

[58] RĀVAṆA—Vibhiṣaṇa, I find you somewhat depressed.

[59] VIBHĪṢAṆA—Depression is natural in the servant serving a master who does not pay heed to a well-spoken word.

[54] ಮೈಥಿಲಿಯನ್ನು ಅವನಿಗೆ ಕೊಟ್ಟುಬಿಡು ಎಂದು ಅನೇಕ ಸಲ ನಾನವನಿಗೆ ಹೇಳಿದ್ದೇನೆ. (ಆದರೆ) ಸ್ನೇಹಿತರಿಗೆ ಶೋಕವುಂಟುಮಾಡುವ ಕಾರಣದಿಂದ ನನ್ನ ಮಾತನ್ನವನು ಕೇಳುವುದೇ ಇಲ್ಲ. [೧೩]

[55] (ಹತ್ತಿರಕ್ಕೆ ಹೋಗಿ) ಮಹಾರಾಜನಿಗೆ ಜಯವಾಗಲಿ !

[56] ರಾವಣ—ವಿಭೀಷಣ, ಬಾ; ಕುಳಿತುಕೊ.

[57] ವಿಭೀಷಣ—ಇಗೋ ಕುಳಿತುಕೊಳ್ಳುತ್ತೇನೆ. (ಕುಳಿತುಕೊಳ್ಳುತ್ತಾನೆ)

[58] ರಾವಣ—ವಿಭೀಷಣ, ಉತ್ಸಾಹಶೂನ್ಯನಾಗಿ ಕಾಣಿಸುತ್ತೀಯಲ್ಲ !

[59] ವಿಭೀಷಣ—ಹೇಳಿದ ಹಿತವಚನವನ್ನು ಗ್ರಹಿಸದ ಸ್ವಾಮಿಯ ಉಪಾಶ್ರಯ ಮಾಡಿದ ಭೃತ್ಯರಿಗೆ ಶೂನ್ಯೋತ್ಸಾಹವೇ !

60 रावणः—छिद्यतामेषा कथा । त्वमपि तावद्वानरमानय ।

61 विभीषणः—यदाज्ञापयति महाराजः । (निष्क्रान्तः)

62 (ततः प्रविशति राक्षसैर्गृहीतो हनूमान्)

63 सर्वे—आः ! इत इतः ।

64 हनूमान्—

नैवाहं धर्षितस्तेन नैर्ऋतेन दुरात्मना ।
स्वयं ग्रहणमापन्नो राक्षसेशदिदृक्षया ॥१४॥

65 (उपगम्य) भो राजन् ! अपि कुशली भवान् ?

---

60 RĀVAṆA—Please end this talk. You too, bring the monkey.

61 VIBHĪṢAṆA—As the great king commands. *(Exit)*

62 *(Then enters Hanūmān held by demons)*

63 ALL—Ah, this way, this way.

64 HANŪMĀN—I was not at all defeated by that wicked demon. I voluntarily got captured, with a desire to see the demon-king. [13]

65 *(Going near)* O king ! are you well ?

---

60 ರಾವಣ—ಈ ಮಾತನ್ನು ಸಾಕುಮಾಡು. ನೀನೂ (ಆ) ವಾನರನನ್ನು ಕರೆದುಕೊಂಡು ಬಾ.

61 ವಿಭೀಷಣ—ಮಹಾರಾಜನ ಅಪ್ಪಣೆಯಂತೆ. (ಹೋಗುತ್ತಾನೆ)

62 (ಬಳಿಕ ರಾಕ್ಷಸರಿಂದ ಬಂಧಿತನಾದ ಹನುಮಂತ ಪ್ರವೇಶಿಸುತ್ತಾನೆ)

63 ಎಲ್ಲರೂ—ಆಃ! ಈ ಕಡೆ, ಈ ಕಡೆ.

64 ಹನೂಮಾನ್—ಆ ದುರಾತ್ಮನಾದ ರಾಕ್ಷಸನಿಂದ ನಾನು ಸೋಲಿಸಲ್ಪಡಲೇ ಇಲ್ಲ. ರಾಕ್ಷಸರಾಜನನ್ನು ನೋಡುವ ಆಸೆಯಿಂದ ನಾನಾಗಿಯೇ ಬಂಧಿತನಾದೆ. [೧೩]

65 (ಹತ್ತಿರಕ್ಕೆ ಹೋಗಿ) ರಾಜನೇ, ನೀನು ಕ್ಷೇಮವೇ?

66 रावणः—( सावज्ञम् ) विभीषण ! किमस्य तत्कर्म ?

67 विभीषणः—महाराज ! [1]अतोऽप्यधिकम् ।

68 रावणः—[2]कथं त्वमवगच्छसि ?

69 विभीषणः—प्रष्टुमर्हति महाराजः कस्त्वमिति ।

70 रावणः—भो वानर ! कस्त्वम् ? केन कारणेन धर्षितोऽस्माकम् अन्तःपुरं प्रविष्टः ?

71 हनूमान्—भोः श्रूयताम् ;

---

[1] अतोऽधिकम् [2] कथं भवाञ्जानाति ?

---

66 RĀVAṆA—*(With contempt)* Vibhīṣaṇa, was all that the doing of this fellow ?

67 VIBHĪṢAṆA—Sire, much more than that.

68 RĀVAṆA—How do you know ?

69 VIBHĪṢAṆA—Your majesty will please ask him—'Who are you ?'

70 RĀVAṆA—O monkey, who are you ? Why have you impudently entered my (ladies') inner apartments ?

71 HANŪMĀN—You may listen;

---

66 ರಾವಣ—(ತಿರಸ್ಕಾರದಿಂದ) ವಿಭೀಷಣ, ಆ ಕೆಲಸ ಇವನದೋ ?

67 ವಿಭೀಷಣ—ಮಹಾರಾಜ, ಅದಕ್ಕೂ ಹೆಚ್ಚಾಗಿ.

68 ರಾವಣ—ನಿನಗೆ ಹೇಗೆ ಗೊತ್ತು ?

69 ವಿಭೀಷಣ—ಮಹಾರಾಜನು ಕೇಳೋಣಾಗಲಿ—'ನೀನು ಯಾರು ?' ಎಂದು.

70 ರಾವಣ—ಎಲೈ ವಾನರನೇ, ನೀನು ಯಾರು ? ಧೃಷ್ಟತನದಿಂದ ನಮ್ಮ ಅಂತಃಪುರವನ್ನು ಯಾವ ಕಾರಣದಿಂದ ಪ್ರವೇಶಿಸಿದೆ ?

71 ಹನೂಮಾನ್—ಎಲೌ, ಕೇಳು—

72 अञ्जनायां समुत्पन्नो मारुतस्यौरसः सुतः ।
प्रेषितो राघवेणाहं हनूमान् नाम वानरः ॥१५॥

73 विभीषणः—महाराज ! किं श्रुतम् ?

74 रावणः—किं श्रुतेन ?

75 विभीषणः—हनूमन् ! किमाह तत्रभवान् राघवः ?

76 हनूमान्—भोः श्रूयतां रामशासनम् ।

77 रावणः — कथं कथं रामशासनमित्याह ? आः ! हन्यतामयं वानरः ।

---

72 I am the direct son of the Wind-god, born of Añjanā; and am the monkey named Hanūmān sent by Rāghava. [15]

73 VIBHĪṢAṆA—Sire, did you hear ?

74 RĀVAṆA—What if I heard ?

75 VIBHĪṢAṆA–Hanūman, what says the noble Rāghava?

76 HANŪMĀN—Sir, you may listen to the command of Rāma.

77 RĀVAṆA — How, how ? You say — 'the command of Rāma ?' Ah ! let this monkey be put to death.

---

72 ಅಂಜನೆಯಲ್ಲಿ ಹುಟ್ಟಿದವನೂ ವಾಯುದೇವನ ಸ್ವಂತ ಮಗನೂ ಆದ ಹನುಮಂತನೆಂಬ ವಾನರ ನಾನು. ರಾಘವನಿಂದ ಕಳುಹಿಸಲ್ಪಟ್ಟಿದ್ದೇನೆ. [೧೫]

73 ವಿಭೀಷಣ—ಮಹಾರಾಜ, ಕೇಳಿದೆಯಾ ?

74 ರಾವಣ—ಕೇಳಿ ಆಗಬೇಕಾದ್ದೇನು ?

75 ವಿಭೀಷಣ—ಹನುಮಂತನೇ, ಪೂಜ್ಯ ರಾಘವನು ಏನು ಹೇಳಿದ ?

76 ಹನೂಮಾನ್—ಎಲೌ, ರಾಮಶಾಸನವನ್ನು ಕೇಳು.

77 ರಾವಣ—ಏನು, ಏನು ? ರಾಮಶಾಸನ ಎಂದೆಯಾ ? ಆಃ ! ಈ ಕೋತಿಯು ಕೊಲ್ಲಲ್ಪಡಲಿ.

78 विभीषणः— प्रसीदतु प्रसीदतु महाराजः । सर्वापराधेष्ववध्याः खलु दूताः । अथवा रामस्य वचनं श्रुत्वा पश्चाद्यथेष्टं कर्तुमर्हति महाराजः ।

79 रावणः—भो वानर ! किमाह स मानुषः ?

80 हनूमान्—श्रूयताम् ;

81 वरशरणमुपेहि शङ्करं वा
प्रविश च दुर्गतमं रसातलं वा
शरवर-परिभिन्न-सर्वगात्रं
यमसदनं प्रतियापयाम्यहं त्वाम् ॥१६॥ इति ।

---

78 VIBHĪṢAṆA — Be appeased, be appeased, great king ! Envoys are never to be put to death whatever their offence. Further, having heard Rāma's message, there-after your majesty may act as it pleases you.

79 RĀVAṆA — O monkey, what says that mortal ?

80 HANŪMĀN — You may listen;

81 'Seek the best protection of S'iva; or, enter into the most impenetrable underworld. Into the abode of death, I will send you with all your limbs cleft by (my) excellent arrows.' [16]

---

78 ವಿಭೀಷಣ—ಮಹಾರಾಜನು ಪ್ರಸನ್ನನಾಗಲಿ. ಎಲ್ಲಾ ಅಪರಾಧಗಳಲ್ಲೂ ದೂತರು ಅವಧ್ಯರೇ ಸರಿ. ಅಥವಾ, ರಾಮನ ಮಾತನ್ನು ಮೊದಲು ಕೇಳಿ, ಆಮೇಲೆ ಮಹಾರಾಜನು ಇಷ್ಟಬಂದಂತೆ ಮಾಡಬಹುದು.

79 ರಾವಣ—ಎಲೈ ವಾನರನೇ! ಆ ಮನುಷ್ಯ ಏನು ಹೇಳುತ್ತಾನೆ?

80 ಹನೂಮಾನ್—ಕೇಳು—

81 "ಸುರಕ್ಷಿತವಾದ (ಯಾವುದೇ) ಆಶ್ರಯವನ್ನಾದರೂ ಸೇರಿಕೋ; ಶಂಕರನಲ್ಲಿಗಾದರೂ ಹೋಗು; ದುರ್ಗತಮವಾದ ರಸಾತಲದೊಳಕ್ಕಾದರೂ

[82] रावणः—ह ह ह !

[83] दिव्यास्त्रैस्त्रिदशगणा मयाभिभूता
दैत्येन्द्रा मम वशवर्तिनः समस्ताः ।
पौलस्त्योऽप्युपहृतपुष्पकोऽवसन्नो
भो ! रामः कथमभियाति मानुषो माम् ॥१७॥

[84] हनूमान् — एवंविधेन भवता किमर्थं प्रच्छन्नं तस्य दारापहरणं कृतम् ?

[85] विभीषणः—सम्यगाह हनूमान् ।

---

[82] RĀVAṆA—Ha, ha, ha !

[83] With divine weapons, legions of gods have been defeated by me. All the demon chiefs are obedient to me. Even Kubera has been humbled being robbed of his aerial car. How can Rāma, a mortal, go to fight with me, fellow?

[84] HANŪMĀN — By you, so great a person, why was his wife carried away stealthily ?

[85] VIBHĪṢAṆA—Hanūmān has spoken aright.

---

ಪ್ರವೇಶಿಸು. (ನನ್ನ) ಶ್ರೇಷ್ಠವಾದ ಬಾಣಗಳಿಂದ (ನಿನ್ನ) ಅವಯುವಗಳೆಲ್ಲವನ್ನೂ ಭಿನ್ನಗೊಳಿಸಿ ನಿನ್ನನ್ನು ಯಮನ ಬೀಡಿಗೆ ಅಟ್ಟುತ್ತೇನೆ." [೧೬] ಎಂದು.

[82] ರಾವಣ—ಹ ಹ ಹ!

[83] ದೇವತೆಗಳ ಸಮೂಹಗಳೇ ನನಗೆ ದಿವ್ಯಾಸ್ತ್ರಗಳ ಮೂಲಕ ಸೋತುಹೋಗಿವೆ. ಎಲ್ಲಾ ದೈತ್ಯರಾಜರೂ ನನ್ನ ವಶವರ್ತಿಗಳು. ಪೌಲಸ್ತ್ಯನೂ ಕೂಡ ಪುಷ್ಪಕ ವಿಮಾನ ಅಪಹರಿಸಲ್ಪಟ್ಟು ಕುಗ್ಗಿಹೋಗಿದ್ದಾನೆ. ಎಲೊ, ಮಾನುಷನಾದ ರಾಮನು ಹೇಗೆ ತಾನೇ ನನ್ನೊಡನೆ ಯುದ್ಧಕ್ಕೆ ಬಂದಾನು? [೧೭]

[84] ಹನೂಮಾನ್—ಇಂತಹ ನೀನು ಕಳ್ಳತನದಿಂದೇಕೆ ಅವನ ಹೆಂಡತಿಯನ್ನಪಹರಿಸಿದೆ?

[85] ವಿಭೀಷಣ—ಹನುಮಂತ ಹೇಳಿದ್ದು ಸರಿ.

86 अपास्य मायया रामं त्वया राक्षसपुङ्गव ।
भिक्षुवेषं समास्थाय च्छलेनापहृता हि सा ॥१८॥

87 रावणः —विभीषण ! किं [1]विपक्षपक्षमवलम्बसे ?

88 विभीषणः—

प्रसीद राजन् ! वचनं हितं मे प्रदीयतां राघवधर्मपत्नी ।
इदं कुलं राक्षसपुङ्गवेन त्वया हि नेच्छामि विपद्यमानम् ॥१९॥

89 रावणः—विभीषण ! अलमलं भयेन ।

---

[1] शत्रुपक्षमवलम्बसे ?

---

86 O demon hero ! she was indeed brought away stealthily by you putting on the guise of a beggar, after luring away Rāma by an illusion. [18]

87 RĀVAṆA -- Vibhīṣaṇa, how is it you take the side of my foe ?

88 VIBHĪṢAṆA — Be pleased, O king ! My words are for (your) good. Please give back the dutiful wife of Rāghava; for, I don't wish (that) this family (of ours should) be destroyed by you, a demon hero. [19]

89 RĀVAṆA—Vibhīṣaṇa, do not fear.

---

86 ರಾಕ್ಷಸ ಪುಂಗವನೇ! ರಾಮನನ್ನು ಮಾಯೆಯಿಂದ ದೂರ ಕಳುಹಿಸಿ ನೀನು ಭಿಕ್ಷುವೇಷವನ್ನು ತಳೆದು ಮೋಸದಿಂದ ತಾನೇ ಅವಳನ್ನಪಹರಿಸಿದೆ?

87 ರಾವಣ—ವಿಭೀಷಣ, ಶತ್ರುಪಕ್ಷವನ್ನವಲಂಬಿಸಿದ್ದೀಯೇನು ?

88 ವಿಭೀಷಣ—ರಾಜನೇ, ಪ್ರಸನ್ನನಾಗು. ನನ್ನ ಮಾತು ಹಿತವಾದುದು. ರಾಘವನ ಧರ್ಮಪತ್ನಿಯನ್ನು ಹಿಂದಕ್ಕೆ ಕೊಟ್ಟುಬಿಡು. ರಾಕ್ಷಸಪುಂಗವನಾದ ನಿನ್ನಿಂದ ಈ ಕುಲವು ವಿಪತ್ತಿಗೊಳಗಾಗುತ್ತಿರುವುದು ನನಗೆ ಸಮ್ಮತವಲ್ಲ. [೧೯]

89 ರಾವಣ—ವಿಭೀಷಣ, ಭಯ ಬಿಡು.

90 कथं लब्धसटः सिंहो मृगेण विनिपात्यते।
गजो वा सुमहान् मत्तः शृगालेन निहन्यते ॥२०॥

91 हनूमान् — भो रावण ! विपद्यमानभाग्येन [2]भवता किं युक्तं राघवमेवं वक्तुम् ? [3]मा तावद्भोः !

92 नक्तञ्चरापसद ! रावण ! राघवं तं
वीराग्रगण्यमतुलं त्रिदशेन्द्रकल्पम् ।
प्रक्षीणपुण्य ! भवता भुवनैकनाथं
वक्तुं किमेवमुचितं गतसार ! नीचैः ॥२१॥

---

[2] त्वया [3] 'मा तावद्भोः' इति नास्ति ।

---

90 How can a long-maned lion be slain by a deer, or a mighty infatuated elephant be killed by a jackal ! [20]

91 HANŪMĀN— O Rāvaṇa, is it proper on the part of you, whose lot is at stake, to speak thus of Rāghava ? O ! do not (speak thus).

92 O accursed demon ! O Rāvaṇa whose merits are completely exhausted ! Is it right for you to speak low thus of Rāghava, the foremost of heroes, without a peer.

---

90 ಉದ್ದವಾದ ಕೇಸರವುಳ್ಳ ಸಿಂಹ ಜಿಂಕೆಯಿಂದ ಹೇಗೆ ತಾನೇ ಕೊಲ್ಲಲ್ಪಟ್ಟೀತು ? ಅಥವಾ ಮದಿಸಿದ ದೊಡ್ಡ ಆನೆ ನರಿಯಿಂದ ಕೊಲ್ಲಲ್ಪಡುತ್ತದೆಯೆ ? [೨೦]

91 ಹನೂಮಾನ್ — ರಾವಣನೇ ! ವಿಪತ್ತಿಗೀಡಾಗಿರುವ ಭಾಗ್ಯವುಳ್ಳ ನೀನು ರಾಘವನ ವಿಚಾರವಾಗಿ ಹೀಗೆ ಅನ್ನುವುದು ಯುಕ್ತವೇ ? ಬೇಡ (ಹಾಗನ್ನ ಬೇಡ).

92 ರಾಕ್ಷಸಾಧಮ ! ರಾವಣ ! ಪುಣ್ಯವೆಲ್ಲ ಸಂಪೂರ್ಣವಾಗಿ ಕ್ಷಯಿಸಿ ಹೋದವನೇ ! ಸತ್ವ ಉಡುಗಿದವನೇ ! ವೀರಾಗ್ರಗಣ್ಯನೂ ಅಸಮಾನನೂ

93 रावणः—कथं कथं नामाभिधत्ते ? हन्यतामयं वानरः। अथवा दूतवधः खलु वचनीयः। शङ्कुकर्ण। लाङ्गूलमादीप्य विसृज्यतामयं वानरः।

94 शङ्कुकर्णः—यदाज्ञापयति महाराजः। इत इतः।

95 रावणः—अथवा एहि तावत्।

96 हनूमान्—अयमस्मि।

97 रावणः—अभिधीयतां मद्वचनात् स मानुषः[1]।

[1] रामः

---

almost an equal of Indra, and the sole lord of the whole world ? You worthless fellow ! [21]

93 RĀVAṆA—How now ? He addresses me by name ! Let this monkey be put to death Nay, killing an envoy would remain a scandal. O S'aṅkukarṇa, after setting fire to his tail, release this monkey.

94 S'AṄKUKARṆA—As the great king commands. This way, this way.

95 RĀVAṆA—Or, just come here.

96 HANŪMĀN—Here I am.

97 RĀVAṆA—Relate to that mortal this message of mine—

---

ದೇವೇಂದ್ರನಂತಿರುವವನೂ ಈ ಭುವನಕ್ಕೇ ಪ್ರಧಾನನಾದ ಸ್ವಾಮಿಯೂ ಆದ ಆ ರಾಘವನನ್ನು ಇಷ್ಟು ಕೀಳಾಗಿ ನೀನು ಆಡುವುದು ಉಚಿತವೇ? [೨೧]

93 ರಾವಣ—ಏನು, ಹೆಸರು ಹಿಡಿದು ಕರೆಯುತ್ತಾನಲ್ಲ! ಈ ವಾನರನು ಕೊಲ್ಲಲ್ಪಡಲಿ! ಅಥವಾ ದೂತವಧ ನಿಂದ್ಯವಾದದ್ದಲ್ಲವೇ! ಶಂಕುಕರ್ಣ! ಬಾಲಕ್ಕೆ ಬೆಂಕಿಹಚ್ಚಿ ಈ ವಾನರನನ್ನು ಬಿಟ್ಟುಬಿಡು.

94 ಶಂಕುಕರ್ಣ—ಮಹಾರಾಜನ ಅಪ್ಪಣೆಯಂತೆ. ಈ ಕಡೆಗೆ, ಈ ಕಡೆಗೆ.

95 ರಾವಣ—ಅಥವಾ, ಇಲ್ಲಿ ಬಾ.

96 ಹನೂಮಾನ್—ಇಗೋ ಬಂದಿದ್ದೇನೆ.

97 ರಾವಣ—ನನ್ನ ಮಾತಿನಿಂದ ಆ ಮನುಷ್ಯನಿಗೆ ಹೇಳು—

98 अभिभूतो मया राम ! दारापहरणादसि ।
यदि तेऽस्ति धनुःश्लाघा दीयतां मे रणो महान् ॥२२॥

99 हनूमान्—अचिराद्द्रक्ष्यसि,

100 अभिहतवरवप्रगोपुराट्टां
रघुवरकार्मुकनादनिर्जितस्त्वम् ।
हरिगणपरिपीडितैः समन्तात्
प्रमदवनैरभिसंवृतां स्वलङ्काम् ॥२३॥

101 रावणः—निर्वास्यतामयं वानरः ।

---

98 'Rāma ! you have been abused by me by the abduction of your wife. If there is in you the pride of an archer, you may give me a great fight.' [22]

99 Hanūmān—Before long, you will see,—

100 Being vanquished by the mere twang of Rāma's bow, (you will see) your Laṅkā with its excellent gates, towers and palaces demolished and encompassed with its pleasure gardens devastated by troops of monkeys all round.

101 Rāvaṇa—Ah ! let this monkey be expelled.

---

98 'ರಾಮನೇ! ಹೆಂಡತಿಯ ಅಪಹರಣದ ಮೂಲಕ ನನ್ನಿಂದ ನೀನು ಪರಿಭವಗೊಳಿಸಲ್ಪಟ್ಟವನಾಗಿದ್ದೀಯೆ. ಬಿಲ್ಲುಗಾರನೆಂಬ ಹೆಮ್ಮೆ ನಿನಗಿದ್ದರೆ ದೊಡ್ಡದೊಂದು ಕಾಳಗವನ್ನು ನನಗೆ ನೀಡು.' [೨೨]

99 ಹನೂಮಾನ್—ವಿಳಂಬವಿಲ್ಲದೆಯೇ ನೋಡುವಿ—

100 ಆ ರಘುಶ್ರೇಷ್ಠನ ಧನುಷ್ಟಂಕಾರದಿಂದಲೇ ಜಯಿಸಲ್ಪಟ್ಟ ನೀನು ಕಪಿ ಸಮೂಹಗಳಿಂದ ವಿನಾಶಗೊಳಿಸಲ್ಪಟ್ಟ ಪ್ರಮದವನಗಳಿಂದ ಎಲ್ಲ ಕಡೆಯೂ ನಿನ್ನ ಲಂಕೆ ಬಳಸಲ್ಪಟ್ಟಿರುವುದನ್ನೂ ಶ್ರೇಷ್ಠವಾದ ಮಹಾದ್ವಾರಗಳೂ ಗೋಪುರಗಳೂ ಉಪ್ಪರಿಗೆಗಳೂ ಕೆಡವಲ್ಪಟ್ಟಿರುವುದನ್ನೂ (ವಿಳಂಬವಿಲ್ಲದೆಯೇ ನೋಡುವಿ). [೨೩]

101 ರಾವಣ—ಈ ವಾನರನನ್ನು ಹೊರಕ್ಕಟ್ಟಬಿಡಿ.

[102] राक्षसाः— इत इतः। ([1]रक्षोभिः सह निष्क्रान्तो हनूमान्)

[103] विभीषणः — [2]प्रसीदतु प्रसीदतु महाराजः। अस्ति कश्चिद् विवक्षा महाराजस्य हितमन्तरेण।

[104] रावणः—उच्यतां; तच्छ्रेयो वयमपि श्रोतारः।

[105] विभीषणः—सर्वथा राक्षसकुलस्य विनाशोऽभ्यागत इति मन्ये।

[106] रावणः—केन कारणेन ?

---

[1] (राक्षसैर्गृहीतो हनुमान् निष्क्रान्तः) [2] 'प्रसीदतु....महाराज' इति नास्ति।

---

[102] DEMONS—This way, this way.

*(Exit Hanūmān with demons)*

[103] VIBHĪṢAṆA—Be pleased, great king! There is something I wish to say for the good of your majesty.

[104] RĀVAṆA—Speak out; we too shall listen to that good.

[105] VIBHĪṢAṆA—I feel that a complete destruction of the demon-race has come near.

[106] RĀVAṆA—But why?

---

[102] ರಾಕ್ಷಸರು—ಈ ಕಡೆಗೆ, ಈ ಕಡೆಗೆ—

(ರಾಕ್ಷಸರೊಡನೆ ಹನುಮಂತ ಹೊರಟುಹೋಗುತ್ತಾನೆ)

[103] ವಿಭೀಷಣ—ಮಹಾರಾಜನು ಪ್ರಸನ್ನನಾಗಲಿ. ಮಹಾರಾಜನ ಹಿತವನ್ನುದ್ದೇಶಿಸಿ ಒಂದು ಮಾತನ್ನು ಹೇಳಲಿಚ್ಛೆಯಿದೆ.

[104] ರಾವಣ – ಹೇಳಲ್ಪಡಲಿ; ಆ ಶ್ರೇಯಸ್ಕರವಾದ ಮಾತನ್ನು ನಾನೂ ಕೇಳುವೆನು.

[105] ವಿಭೀಷಣ—ಸರ್ವಪ್ರಕಾರದಿಂದಲೂ ರಾಕ್ಷಸಕುಲದ ವಿನಾಶ ಬಂದೇ ಬಿಟ್ಟಿತೆಂದು ಭಾವಿಸುತ್ತೇನೆ.

[106] ರಾವಣ—ಯಾವ ಕಾರಣದಿಂದ ?

15

आर्यपुत्र ! एतस्मिन् दुःखसागरे मां निक्षिप्य कुत्र गतोऽसि ? यावन्न म्रिये । किन्नु खल्वलीकमेतद् भवेत् ? भद्र ! येनासिनार्यपुत्रस्यासदृशं कृतं तेन मामपि मारय । [हा अय्यउत्त ! परिमळणवकमळसण्णिहे वदणे परिवुत्तणअणे पेक्खन्ती अदिधीरा खु ह्मि मन्दभाआ । हा अय्यउत्त ! एदस्सिं दुःखसाअरे मं णिक्खिविअ कहिं गदो सि ? जाव णं मरामि । किंणुखु अळिअं एदं भवे ? भद्द ! जेण असिणा अय्यउत्तस्स असदिसं किदं, तेण मं वि मारेहि । ]

[34] रावणः—

व्यक्तमिन्द्रजिता युद्धे हते तस्मिन् नराधमे ।
लक्ष्मणेन सह भ्रात्रा केन त्वं मोक्षयिष्यसे ॥१०॥

[35] (नेपथ्ये) रामेण रामेण !

---

my lord ! Having cast me into this ocean of misery, where have you gone? I do not die even. Could all this be false? Good sir, with the same sword with which this dreadful deed was wrought on my lord, slay me too.

[34] RĀVAṆA—When that wretch together with his brother Lakṣmaṇa has been clearly slain by Indrajit in battle, by whom will you be released ? [10]

[35] *(Behind the curtain)* By Rāma, by Rāma........

---

ತುಂಬ ಧೀರೆಯೇ ಸರಿ. ಆರ್ಯಪುತ್ರ, ದುಃಖ ಸಾಗರದಲ್ಲಿ ನನ್ನನ್ನು ಹಾಕಿ ಎಲ್ಲಿಗೆ ಹೋಗಿಬಿಟ್ಟೆ? ನಾನು ಸಾಯುವುದಾಗಿಯೂ ಇಲ್ಲ. ಇದೇನಾದರೂ ಸುಳ್ಳಾಗಿರಬಹುದೇ? ಭದ್ರ, ಯಾವ ಕತ್ತಿಯಿಂದ ಆರ್ಯಪುತ್ರನಿಗೆ ತಕ್ಕುದಲ್ಲದ ಈ ಅಕೃತ್ಯವೆಸಗಲ್ಪಟ್ಟಿತೋ ಅದೇ ಕತ್ತಿಯಿಂದ ನನ್ನನ್ನೂ ಕೊಂದುಬಿಡು.

[34] ರಾವಣ — ತಮ್ಮನಾದ ಲಕ್ಷ್ಮಣನೊಡನೆ ಆ ನರಾಧಮನು ವ್ಯಕ್ತವಾಗಿಯೇ ಯುದ್ಧದಲ್ಲಿ ಹತನಾಗಿರಲಾಗಿ ಯಾರಿಂದ ನೀನು ಬಿಡುಗಡೆ ಮಾಡಲ್ಪಡುವಿ? [೧೦]

[35] (ತೆರೆಯ ಹಿಂದೆ) ರಾಮನಿಂದ, ರಾಮನಿಂದ !

36 सीता—चिरं जीव !

37 (प्रविश्य) राक्षसः—( ससंभ्रमम् ) रामेण रामेण !

38 रावणः—कथं कथं रामेणेति ?

39 राक्षसः — प्रसीदतु प्रसीदतु महाराजः । अतिपातिवृत्तान्त-निवेदनत्वरयावस्थान्तरं नावेक्षितम् ।

40 रावणः—ब्रूहि ब्रूहि । किं कृतं मनुजतापसेन ?

41 राक्षसः—श्रोतुमर्हति महाराजः । तेन खलु,

---

36 **SĪTĀ**—Live long !

37 *(Entering)* **RĀKṢASA**—*(Excited)* By Rāma, by Rāma....

38 **RĀVAṆA**—What do you mean by 'By Rāma' ?

39 **RĀKṢASA**—Pray, pardon, great king ! In my haste to report to you urgent news, the peculiar situation (of yours) was not paid heed to.

40 **RĀVAṆA** — Speak, speak; what has been done by that mortal ascetic ?

41 **RĀKṢASA**—Deign to listen, great king ! Indeed, he,—

---

36 ಸೀತೆ—ಚಿರಕಾಲ ಬಾಳು !

37 (ಪ್ರವೇಶಿಸಿ) ರಾಕ್ಷಸ—(ಆತುರದಿಂದ) ರಾಮನಿಂದ, ರಾಮನಿಂದ.......

38 ರಾವಣ—ಏನದು, ರಾಮನಿಂದ ?

39 ರಾಕ್ಷಸ — ಮಹಾರಾಜನು ಪ್ರಸನ್ನನಾಗಬೇಕು. ಅತ್ಯಗತ್ಯವಾದ ವೃತ್ತಾಂತವನ್ನು ಬಿನ್ನೈಸುವ ತ್ವರೆಯಿಂದ (ಮಹಾರಾಜನಿರುವ) ಸನ್ನಿವೇಶ ವಿಶೇಷವನ್ನು ಗಮನಿಸಲಿಲ್ಲ.

40 ರಾವಣ—ಹೇಳು, ಹೇಳು. ಆ ನರತಾಪಸನಿಂದ ಏನು ಮಾಡಲ್ಪಟ್ಟಿತು?

41 ರಾಕ್ಷಸ—ಮಹಾರಾಜನು ಆಲಿಸಬೇಕು.—

[42] उदीर्णसत्त्वेन महाबलेन लङ्केश्वरं त्वामभिभूय शीघ्रम् ।
सलक्ष्मणेनाद्य हि राघवेण प्रसह्य युद्धे निहतः सुतस्ते ॥

[43] रावणः—आः दुरात्मन् ! समरभीरो !

[44] देवाः सेन्द्रा जिता येन दैत्याश्चापि पराङ्मुखाः ।
इन्द्रजित् सोऽपि समरे मानुषेण निहन्यते ॥१२॥

[45] राक्षसः — प्रसीदतु प्रसीदतु महाराजः । महाराजपादमूले कुमारमन्तरेणानृतं नाभिधीयते ।

---

[42] Rāghava of excessive courage and great strength, together with Lakṣmaṇa, having overpowered you soon, has slain your son by force. [11]

[43] RĀVAṆA—Ha villian ! coward !

[44] Would ever Indrajit be slain by a mortal in fight when gods inclusive of Indra have been vanquished and daityas turned away by him ? [12]

[45] RĀKṢASA—Be pleased, be pleased, great king. A lie about the prince is never uttered before your majesty.

---

[42] ವಿಶೇಷ ಸತ್ವವುಳ್ಳ, ಮತ್ತು ಮಹಾಬಲಶಾಲಿಯಾದ ಆ ರಾಘವನಿಂದ ಲಕ್ಷ್ಮಣನೊಡಗೂಡಿ, ಶೀಘ್ರವಾಗಿಯೇ ಲಂಕೇಶ್ವರನಾದ ನಿನ್ನನ್ನು ಶಕ್ತಿ ಗುಂದಿದವನನ್ನಾಗಿ ಮಾಡಿ, ನಿನ್ನ ಮಗ ಯುದ್ಧದಲ್ಲಿ ಬಲಾತ್ಕಾರವಾಗಿ ಕೊಲ್ಲಲ್ಪಟ್ಟನು. [೧೧]

[43] ರಾವಣ—ಆಃ ದುರಾತ್ಮನೆ? ಯುದ್ಧಭೀರುವೆ!

[44] ಇಂದ್ರಸಹಿತರಾದ ದೇವತೆಗಳು ಯಾರಿಂದ ಪರಾಜಿತರಾದರೋ, ದೈತ್ಯರೂ ಪರಾಙ್ಮುಖರಾದರೋ, ಅಂತಹ ಇಂದ್ರಜಿತ್ತೂ ಕೂಡ ಯುದ್ಧದಲ್ಲಿ (ಸಾಮಾನ್ಯ) ಮನುಷ್ಯನೊಬ್ಬನಿಂದ ಕೊಲ್ಲಲ್ಪಡುತ್ತಾನೆಯೇ? [೧೨]

[45] ರಾಕ್ಷಸ—ಮಹಾರಾಜನು ಪ್ರಸನ್ನನಾಗಲಿ. ಮಹಾರಾಜನ ಪಾದ ಮೂಲದಲ್ಲಿ ಕುಮಾರನ ವಿಷಯವಾಗಿ ಸುಳ್ಳು ಹೇಳಲ್ಪಡುವುದಿಲ್ಲ.

46 रावणः—हा वत्स ! मेघनाद ! (इति मूर्छितः पतति)

47 राक्षसः—महाराज, समाश्वसिहि समाश्वसिहि ?

48 रावणः—(प्रत्यभिज्ञाय)

हा वत्स ! सर्वजगतां ज्वरकृत् ! कृतास्त्र !
हा वत्स ! वासवजिदानतवैरिचक्र !
हा वत्स ! वीर ! गुरुवत्सल ! [1]युद्धशौण्ड
हा वत्स ! मामिह विहाय गतोऽसि कस्मात् ॥१३॥

([2]इति मोहमुपगतः)

---

[1] युद्धशूर [2] इति पतति

---

46 **Rāvaṇa**—Ha my child, Meghanāda!
*( Falls down in a swoon )*

47 **Rākṣasa**—Great king! take heart, take heart.

48 **Rāvaṇa**—*(Recovering)* Ha! my child, versed in arms, and a torment to all worlds! Alas! my dear conqueror of Indra! You, the whole circle of whose enemies had been humbled! Alas! my son, a hero, dear to your parents and skilled in fight! Alas! my dear boy! why have you gone away leaving me here? [13] *(Swoons)*

---

46 ರಾವಣ—ಹಾ ವತ್ಸ ! ಮೇಘನಾದ! (ಮೂರ್ಛಿತನಾಗಿ ಬೀಳುತ್ತಾನೆ)

47 ರಾಕ್ಷಸ—ಮಹಾರಾಜ, ಸೈರಿಸಿಕೊ, ಸೈರಿಸಿಕೊ.

48 ರಾವಣ—( ಮೂರ್ಛೆಯಿಂದೆದ್ದು ) ಹಾ ವತ್ಸ! ಎಲ್ಲ ಜಗತ್ತುಗಳಿಗೂ ಜ್ವರವುಂಟುಮಾಡುವವನೇ! ಅಸ್ತ್ರನಿಪುಣನೆ! ಹಾ ವತ್ಸ! ಇಂದ್ರನನ್ನು ಜಯಿಸಿದವನೆ! ಶತ್ರುಚಕ್ರದ ತಲೆ ತಗ್ಗಿಸಿದವನೆ! ಹಾ ವತ್ಸ! ವೀರ! ಗುರುವತ್ಸಲ! ಯುದ್ಧಶೂರ! ಹಾ ವತ್ಸ! ನನ್ನನ್ನಿಲ್ಲಿ ಬಿಟ್ಟುಬಿಟ್ಟು ಏತಕ್ಕೆ ಹೊರಟುಹೋದೆ? [೧೩]

(ಮೂರ್ಛಿತನಾಗುತ್ತಾನೆ)

[49] राक्षसः — हा धिक् ! त्रैलोक्यविजयी लङ्केश्वर एतामवस्थां प्रापितो हतकेन विधिना । महाराज, समाश्वसिहि समाश्वसिहि ।

[50] रावणः — (समाश्वस्य) इदानीमनर्थहेतुभूतया सीतया किमनया, त्रैलोक्यविजयविफलया चपलया श्रिया च ! किं भोः कृतान्तहतक ! अद्यापि भयविह्वलोऽसि !

[51] इदानीमपि निःस्नेहो वत्सेनेन्द्रजिता विना ।
कष्टं कठोरहृदयो जीवत्येष दशाननः ॥१४॥
(इति सन्तापात् पतति)

---

[49] RĀKṢASA—O fie upon it ! The lord of Laṅkā the conqueror of the triple world, has been brought to this state by the accursed fate! Great king, take heart, take heart !

[50] RĀVAṆA—*(Recovering)* Now, of what good is this Sītā, the cause of misfortunes and this fickle fortune which will be useless even after the conquest of the three worlds? What, Oh accursed death ! even now are you shuddering with fear ?

[51] Devoid of affection and without the dear son Indrajit, O misery ! this hard-hearted Rāvaṇa lives still. [14]

*(Falls down in grief)*

---

[49] ರಾಕ್ಷಸ—ಹಾ ಧಿಕ್ ! ತ್ರೈಲೋಕ್ಯವಿಜಯಿಯಾದ ಲಂಕೇಶ್ವರನೂ ಹಾಳು ವಿಧಿಯಿಂಧ ಈ ಅವಸ್ಥೆಗೆ ತರಲ್ಪಟ್ಟಿದ್ದಾನೆ! ಮಹಾರಾಜ, ಸಂತೈಸಿಕೊ, ಸಂತೈಸಿಕೊ.

[50] ರಾವಣ—(ಚೇತರಿಸಿಕೊಂಡು) ಅನರ್ಥಗಳಿಗೆ ಕಾರಣಭೂತಳಾದ ಈ ಸೀತೆಯಿಂದಲೇ ಆಗಲಿ, ತ್ರೈಲೋಕ್ಯವಿಜಯವೂ ವಿಫಲವಾಗುವ ಚಪಲ ಐಶ್ವರ್ಯದಿಂದಲೇ ಆಗಲಿ ಇನ್ನೇನಾಗಬೇಕು? ಎಲೌ ಕೃತಾಂತಹತಕನೆ! ಈಗಲೂ ಭಯದಿಂದ ವಿಹ್ವಲನಾಗಿದ್ದೀಯಾ ?

[51] ಸ್ನೇಹಶೂನ್ಯನೂ ಕಠೋರಹೃದಯನೂ ಆದ ಈ ದಶಾನನನು ವತ್ಸನಾದ ಇಂದ್ರಜಿತ್ತು ಇಲ್ಲದಿದ್ದರೂ ಈಗಲೂ ಜೀವಿಸುತ್ತಿದ್ದಾನೆ; ಕಷ್ಟ! [೧೪]

(ಸಂತಾಪದಿಂದ ಬೀಳುತ್ತಾನೆ)

[52] राक्षसः— हा ! भो रजनीचरवीराः[1] ! एवं गते राजन्यन्तः-
कक्ष्यास्थिता रक्षिणश्चाप्रमत्ता भवन्तु भवन्तः ।

[33] (नेपथ्ये) भो भो रजनीचरवीराः ! समरमुखनिरस्तप्रहस्तनिकुम्भ-
कुम्भकर्णेन्द्रजिद्विकलबलजलधिजनितभयचकितविमुखाः ! चपलपलायन-
मनुचितमविरतममरसमराणि जितवतां भवतामथ च [2]विश्वविजय-
विख्यातविंशद्बाहुशालिनि भर्तर्यत्र स्थितवति लङ्केश्वरे[3] ।

---

[1] वीराः ! अन्तःकक्ष्या०

[2] विश्वलोकविजय० [3] लङ्केश्वरे । तस्मादप्रमत्ता भवन्तु भवन्तः ।

---

[52] RĀKṢASA—Alas ! O you demon heroes ! When the king is in such a state, you, guards in the inner apartments, should be watchful.

[53] ( *Behind the curtain* ) O, you demon warriors, turning your backs timidly in fright caused by the ocean-like army getting dispirited by the death of Prahasta, Nikumbha, Kumbhakarṇa and Indrajit in the van of battle ! This timorous flight does not become of you who have won the battles against the gods successively ; and more so when our master, the lord of Laṅkā adorned with his twenty arms renown for conquering the entire universe, is still here.

---

[52] ರಾಕ್ಷಸ—ಹಾ ಎಲೈ ನಿಶಾಚರವೀರರೇ! ರಾಜನು ಈ ಗತಿಗಿಳಿದಿರಲಾಗಿ, ಒಳಗಿನ ಕೊಠಡಿಗಳಲ್ಲಿರುವ ರಕ್ಷಕರಾದ ನೀವು ಅಪ್ರಮತ್ತರಾಗಿರಬೇಕು.

[53] ( ತೆರೆಯಹಿಂದೆ ) ಎಲೈ ನಿಶಾಚರವೀರರೆ! ಯುದ್ಧದ ಮುಂಭಾಗದ ಸಾಲುಗಳಲ್ಲಿ ಪ್ರಹಸ್ತ, ನಿಕುಂಭ ಕುಂಭಕರ್ಣ ಇಂದ್ರಜಿತ್— ಇವರು ಮಡಿದುದರಿಂದ ಎದೆಗುಂದಿದ ಸೈನ್ಯಸಾಗರದಲ್ಲುಂಟಾದ ಭಯದಿಂದ ಚಕಿತರಾಗಿ ಚಂಚಲತೆಯಿಂದ ಪಲಾಯನಮಾಡುವುದು ನಿಮಗೆ ಉಚಿತವಲ್ಲ, — ಅದೂ ವಿಶ್ವವನ್ನೇ ಗೆದ್ದು ವಿಖ್ಯಾತವಾದ ಇಪ್ಪತ್ತು ತೋಳುಗಳುಳ್ಳ ನಮ್ಮ ಒಡೆಯ ಲಂಕೇಶ್ವರ ಇಲ್ಲೇ ಇರುವಾಗ.

[54] रावणः—( श्रुत्वा, सामर्षम् ) [3]गच्छ, भूयो ज्ञायतां वृत्तान्तः ।

[55] राक्षसः—यदाज्ञापयति महाराजः[4] । (निष्क्रम्य, प्रविश्य) जयतु महाराजः ! एष हि रामः ।

[56] धनुषि निहितबाणस्त्वामतिक्रम्य गर्वा-
द्धरिगणपरिवारो हाससम्फुल्लनेत्रः ।
रणशिरसि सुतं ते पातयित्वा तु राज-
न्नभिपतति हि लङ्कां सन्दिधक्षुर्यथैव ॥१५॥

[57] रावणः—(सहसोत्थाय, सरोषम् ) क्वासौ ? क्वासौ ? (असिमुद्यम्य)

---

[3] गच्छ, ज्ञायतां.... । [4] लङ्केश्वरः

---

[54] RĀVAṆA—*( Listening angrily )* Go, get more news.

[55] RĀKṢASA—As the great king commands! *( Exit and re-enter )* Victory, great king! This Rāma,

[56] Having fixed an arrow to his bow ignoring you in his arrogance and having slain your son in the van of the fight, he,—with the train of his monkey-troops, his eyes wide open as he is smiling,— is rushing towards Laṅkā, as if to set it ablaze. [15]

[57] RĀVAṆA—*( Suddenly rising, in rage )* Where is he ?

---

[54] ರಾವಣ—(ಆಲಿಸಿ, ಕೋಪದಿಂದ) ಹೋಗು, ಹೆಚ್ಚಿಗೆ ಸಮಾಚಾರ ತಿಳಿ.

[55] ರಾಕ್ಷಸ --ಮಹಾರಾಜನ ಅಪ್ಪಣೆಯಂತೆ. (ಹೋಗಿ, ಪುನಃ ಬಂದು) ಮಹಾರಾಜನಿಗೆ ಜಯವಾಗಲಿ. ಈ ರಾಮನಾದರೋ

[56] ಗರ್ವದಿಂದ ನಿನ್ನನ್ನು ಅಲಕ್ಷಿಸಿ, ಧನುಸ್ಸಿನಲ್ಲಿ ಬಾಣ ತೊಟ್ಟು, ಕಪಿ ಸಮೂಹಗಳ ಪರಿವಾರವುಳ್ಳವನಾಗಿ, ನಗುವಿನಿಂದ ವಿಶಾಲವಾದ ಕಣ್ಣುಗಳುಳ್ಳವನಾಗಿ, ಯುದ್ಧದ ಮುನ್ನಾಲಿನಲ್ಲಿ ನಿನ್ನ ಮಗನನ್ನು ಕೆಡವಿಬಿಟ್ಟು, ಲಂಕೆಯನ್ನು ಆಕ್ರಮಿಸುತ್ತಿದ್ದಾನೆ, — ಸುಟ್ಟು ಹಾಕಲು ಬಯಸುತ್ತಿರುವವನು ಹೇಗೋ ಹಾಗೆ. [೧೫]

[57] ರಾವಣ--(ಇದ್ದಕ್ಕಿದ್ದಂತೆ ಎದ್ದು, ರೋಷದಿಂದ; ಎಲ್ಲಿ ಅವನು? ಅವನೆಲ್ಲಿ?

58 वज्रीभकुम्भतटभेदकठोरधारः
क्रोधोपहारमसिरेष विधास्यति त्वाम् ।
सम्प्रत्यवन्त्वनिमिषा इह मत्करस्थः
क्षुद्र ! क्व यास्यसि कुतापस ! तिष्ठ तिष्ठ ॥१६॥

59 राक्षसः—महाराज ! अलमतिसाहसेन ।

60 सीता—अनिष्टान्यनर्हाण्यनिमित्तानीदानीं कुर्वतो रावणस्याचिरेण मरणं भविष्यति । [अणिट्ठाणि अणरुहाणि अणिमित्ताणि इदाणिं करअंतस्स रावणस्स अइरेण मरणं भविस्सदि । ]

61 रावणः — अस्याः कारणेन बहवो भ्रातरः सुताः सुहृदश्च मे

---

Where is he? *( Raising his sword )*

58 This sword, whose edge is hardened by the cleaving of the wide temples of the elephant of Indra and which I hold in my hand here, shall make you an offering to my wrath. Let the gods protect you. Vile fellow, whither are you going? Stay, stay, you miserable ascetic. [16]

59 RĀKṢASA—O great king, do not be too rash.

60 SITĀ—Very soon there shall be the death of Rāvaṇa who now does unpleasant, unworthy and purposeless deeds.

61 RĀVAṆA—On account of this woman, so many

---

(ಕತ್ತಿಯನ್ನೆತ್ತಿಕೊಂಡು)

58 ಇಂದ್ರನ ಆನೆಯ ಕುಂಭಸ್ಥಲವನ್ನು ಭೇದಿಸಿ ಕಠಿಣವಾದ ಅಲಗುಳ್ಳ, ನನ್ನ ಕೈಯಲ್ಲಿರುವ ಈ ಕತ್ತಿಯು ನಿನ್ನನ್ನು ನನ್ನ ಕೋಪಕ್ಕೆ ಕಾಣಿಕೆಯನ್ನಾಗಿ ಮಾಡಿಬಿಡುತ್ತದೆ; ಈಗ ದೇವತೆಗಳು (ನಿನ್ನನ್ನು) ಇಲ್ಲಿ ಕಾಪಾಡಲಿ! ಕ್ಷುದ್ರ! ಕುತ್ಸಿತನಾದ ತಾಪಸ! ಎಲ್ಲಿಗೆ ಹೋಗುವಿ? ನಿಲ್ಲು, ನಿಲ್ಲು. [೧೬]

59 ರಾಕ್ಷಸ—ಮಹಾರಾಜ, ಅತಿಯಾಗಿ ದುಡುಕುವುದು ಬೇಡ.

60 ಸೀತೆ—ಅನಿಷ್ಟವೂ ಅಯೋಗ್ಯವೂ ನಿಮಿತ್ತವಿಲ್ಲದೆಯೇ ಎಸಗಿದವೂ ಆದ ಕಾರ್ಯಗಳನ್ನು ಮಾಡುತ್ತಿರುವ ರಾವಣನಿಗೆ ಬೇಗನೆ ಮರಣವುಂಟಾಗುತ್ತದೆ.

61 ರಾವಣ—ಇವಳ ಕಾರಣದಿಂದ ಬಹು ಮಂದಿ ನನ್ನ ಭ್ರಾತೃಗಳೂ,

निहताः । तस्मादमित्रविषयमस्या हृदयं भित्त्वा कृष्टान्त्रमालालङ्कृतः खड्गाशनिपातेन समनुजयुगलं सकलवानरकुलं ध्वंसयामि ।

[62] राक्षसः — प्रसीदतु प्रसीदतु महाराजः । [1]अलमलमिदानीम् अखिलावलेपमन्तरेणानवरतवृथाप्रयासेन । अवश्यं स्त्रीवधो न कर्तव्यः ।

[63] रावणः—तेन हि [2]स्यन्दनमानय ।

[64] राक्षसः—यदाज्ञापयति महाराजः । (निष्क्रम्य, प्रविश्य) जयतु

---

[1] अलमलं स्त्रीवधो न कर्तव्यः [2] क्षिप्रमानीयतां स्यन्दनः

---

brothers, sons and friends of mine have been slain. Hence, having cleaven her heart, the home of enmity, and adorned with the garland of her entrails, I shall destroy the whole host of monkeys together with the two mortals, with a blow from my sword which is like a thunder-bolt.

[62] RĀKṢASA—Be pleased, be pleased O king! Enough of endless vain efforts against the arrogance of the enemy's army now. And surely a woman should not be put to death.

[63] RĀVAṆA—Well then, get my chariot.

[64] RĀKṢASA—As the great king commands. *(Exit and*

---

ಸುತರೂ, ಸ್ನೇಹಿತರೂ ಹತರಾದರು. ಆದ್ದರಿಂದ ಹಗೆತನದ ಬೀಡಾಗಿರುವ ಇವಳ ಹೃದಯವನ್ನು ಸೀಳಿ ಕರುಳುಗಳನ್ನೆಳೆದು ಅವುಗಳಿಂದ ಅಲಂಕೃತನಾಗಿ ನನ್ನ ಖಡ್ಗವೆಂಬ ಸಿಡಿಲ ಬಡಿತದಿಂದ ಆ ಇಬ್ಬರು ಮನುಷ್ಯರಿಂದ ಕೂಡಿದ ವಾನರಕುಲವನ್ನೆಲ್ಲ ಧ್ವಂಸಮಾಡಿಬಿಡುತ್ತೇನೆ.

[62] ರಾಕ್ಷಸ—ಮಹಾರಾಜನು ಪ್ರಸನ್ನನಾಗಬೇಕು. ಈಗ ಶತ್ರುಬಲದ ಸೊಕ್ಕನ್ನು ಮುರಿಯಲು ನಿರಂತರವೂ ವ್ಯರ್ಥವಾಗಿ ಆಯಾಸಪಡುವುದು ಸಾಕು. ಸ್ತ್ರೀವಧವಂತೂ ಖಂಡಿತವಾಗಿಯೂ ಮಾಡತಕ್ಕದ್ದಲ್ಲ.

[63] ರಾವಣ—ಹಾಗಾದರೆ ರಥವನ್ನು ತೆಗೆದುಕೊಂಡು ಬಾ.

[64] ರಾಕ್ಷಸ—ಮಹಾರಾಜನ ಅಪ್ಪಣೆಯಂತೆ. (ಹೋಗಿ, ಪುನಃ ಬಂದು)

महाराजः ! इदं स्यन्दनम् ।

[65] रावणः — (रथमारुह्य)

समावृतं सुरैरद्य सीते द्रक्ष्यसि राघवम् ।
मम चापच्युतैस्तीक्ष्णैर्बाणैराक्रान्तचेतसम् ॥१७॥

(निष्क्रान्तः सपरिवारो रावणः)

[66] सीता — ईश्वराः ! आत्मनः कुलसदृशेन चारित्रेण यद्यहमनुसराम्यार्यपुत्रम् , आर्यपुत्रस्य विजयो भवतु । [इस्सरा ! अत्तणो कुलसदिसेण चारित्तेण जदि अहं अणुसरामि अय्यउत्तं, अय्यउत्तस्स विजओ होदु ।]

(निष्क्रान्ता)

## इति पञ्चमोऽङ्कः

---

*re-enter )* Victory to the great king! Here is the chariot.

[65] RĀVAṆA—*( Mounting the chariot)* To-day, Sīta, you shall see Rāma surrounded by gods (and) his heart beset with sharp arrows shot from my bow. [17]

*( Exit Rāvaṇa with retinue)*

[66] SĪTĀ—O gods! If I have been following my lord with the faithfulness beseeming my family (tradition), may my lord be victorious. *( Exit )*

## END OF THE FIFTH ACT

---

ಮಹಾರಾಜನಿಗೆ ಜಯವಾಗಲಿ ! ಇಗೋ ರಥ.

[65] ರಾವಣ—(ರಥವನ್ನು ಹತ್ತಿ) ಎಲೌ ಸೀತೆ, ದೇವತೆಗಳಿಂದ ಸುತ್ತುವರಿಯಲ್ಪಟ್ಟ ರಾಘವನ ಎದೆಗೆ ನನ್ನ ಧನುಸ್ಸಿನಿಂದ ಹೊಡೆಯಲ್ಪಟ್ಟ ತೀಕ್ಷ್ಣವಾದ ಬಾಣಗಳು ನಾಟಕೊಂಡಿರುವುದನ್ನಿಂದು ನೋಡುವಿ. [೧೭]

( ರಾವಣನು ಪರಿವಾರಸಹಿತನಾಗಿ ಹೋಗುತ್ತಾನೆ )

[66] ಸೀತೆ—ದೇವತೆಗಳೆ ! ನನ್ನ ಕುಲಕ್ಕೆ ಸದೃಶವಾದ ಚಾರಿತ್ರ್ಯದಿಂದ ನಾನು ಆರ್ಯಪುತ್ರನನ್ನು ಅನುಸರಿಸುತ್ತಿರುವೆನಾದರೆ, ಆರ್ಯಪುತ್ರನಿಗೆ ವಿಜಯವಾಗಲಿ. (ಹೋಗುತ್ತಾಳೆ)

## ಇಂತು ಐದನೆಯ ಅಂಕ

# अथ षष्ठोऽङ्कः

(ततः प्रविशति विद्याधरात्रयः)

[2] सर्वे—एते स्मो भो ! एते स्मः ।

[3] प्रथमः— इक्ष्वाकुवंश-विपुलोज्ज्वलदीप्तकेतोः

[4] द्वितीयः— रामस्य रावणवधाय कृतोद्यमस्य ।

[5] तृतीयः— सङ्ग्रामदर्शन-कुतूहल-बद्धचित्ताः

[6] सर्वे— प्राप्ता वयं हिमवतः शिखरात् प्रतूर्णम् ॥

# ACT VI

*(Then enter three Vidyādharas)*

[2] **All**—Here we are, Oh ! here we are !

[3] **The First** — Of Rāma, the large, bright and radiant standard of the Ikṣvāku race,

[4] **The Second**— Of Rāma engaged in the destruction of Rāvaṇa,

[5] **The Third** — The fight (of that Rāma), our minds are filled with eagerness to behold.

[6] **All**—(Hence) we have swiftly arrived (here) from the peak of the Himālayas. [1]

# ಆರನೆಯ ಅಂಕ

( ಬಳಿಕ ಮೂವರು ವಿದ್ಯಾಧರರು ಪ್ರವೇಶಿಸುತ್ತಾರೆ )

[2] ಎಲ್ಲರೂ— ಇಗೋ ನಾವಿಲ್ಲಿದ್ದೇವೆ.

[3] ಮೊದಲನೆಯವನು — ಇಕ್ಷ್ವಾಕುವಂಶದ ವಿಶಾಲವೂ ಉಜ್ಜ್ವಲವೂ ಹೊಳೆಯುವುದೂ ಆದ ಧ್ವಜವೇ ಆಗಿರುವ,

[4] ಎರಡನೆಯವನು— ರಾವಣವಧಕ್ಕೆ ಯತ್ನಿಸಿರುವ ರಾಮನ

[5] ಮೂರನೆಯವನು—ಸಂಗ್ರಾಮವನ್ನು ನೋಡುವ ಕುತೂಹಲ ತುಂಬಿದ ಮನಸ್ಸುಳ್ಳವರಾಗಿ

[6] ಎಲ್ಲರೂ— ನಾವು ಹಿಮಾಲಯ ಶಿಖರದಿಂದ ಬೇಗ ಬಂದಿದ್ದೇವೆ. [೧]

[7] प्रथमः — चित्ररथ ! एते देवदेवर्षिसिद्धविद्याधरादयो निरन्तरं नभः कृत्वा स्थिताः । तस्माद्वयमप्येतेषामेतान् गणान् परिहरन्तः स्वैरम् एकान्ते स्थित्वा रामरावणयोर्युद्धविशेषं पश्यामः ।

[8] उभौ — बाढम् । (तथा कृत्वा)

[9] प्रथमः—अहो प्रतिभयदर्शनीया खल्वियं युद्धभूमिः ! इह हि,

[10] रजनिचरशरीरनीरकीर्णा कपिवरवीचियुता वरासिनक्रा ।
उदधिरिव विभाति युद्धभूमी रघुवरचन्द्रशरांशुवृद्धवेगा ॥

---

[7] THE FIRST—Citraratha ! These gods, godly sages, Siddhas, Vidyādharas, and such others are here crowded in the sky. Hence, we too, avoiding the groups of these and remaining aloof, shall freely behold the strange fight between Rāma and Rāvaṇa.

[8] BOTH—Very well. *(They do so)*

[9] THE FIRST—Lo ! This battle-field is an abhorring sight. Here, indeed,

[10] This battle-field appears like an ocean flooded with the water-like corpses of demons, full of wave-like monkey heroes, (infested) with sharp swords that are like crocodiles

---

[7] ಮೊದಲನೆಯವನು — ಚಿತ್ರರಥ! ಈ ದೇವತೆಗಳು, ದೇವರ್ಷಿಗಳು, ಸಿದ್ಧರು, ವಿದ್ಯಾಧರರು ಮುಂತಾದವರು ಆಕಾಶದಲ್ಲಿ ಸ್ಥಳವೇ ಇಲ್ಲದಂತೆ ಮಾಡಿ ನಿಂತಿದ್ದಾರೆ. ಆದ್ದರಿಂದ ನಾವೂ ಇವರ ಈ ಗುಂಪುಗಳನ್ನು ತಪ್ಪಿಸಿ ಕೊಂಡು ನಮ್ಮ ಇಚ್ಛೆಯಂತೆ ಏಕಾಂತದಲ್ಲಿ ನಿಂತು ರಾಮರಾವಣರ ಯುದ್ಧ ವಿಶೇಷವನ್ನು ನೋಡೋಣ.

[8] ಇಬ್ಬರೂ—ಆಗಲಿ. (ಹಾಗೆ ಮಾಡಿ)

[9] ಮೊದಲನೆಯವನು—ಓಹೋ, ಈ ಯುದ್ಧಭೂಮಿ ಅದೆಷ್ಟು ಭಯಂಕರ ವಾಗಿ ಕಾಣಿಸುತ್ತಿದೆ! ಇಲ್ಲಿಯಾದರೋ

[10] ರಾಕ್ಷಸರ (ಮೃತ) ಶರೀರಗಳೆಂಬ ನೀರಿನಿಂದ ತುಂಬಿ, ಕಪಿಶ್ರೇಷ್ಠ ರೆಂಬ ಅಲೆಗಳಿಂದ ಕೂಡಿ, ಉತ್ತಮವಾದ ಕತ್ತಿಯೆಂಬ ಮೊಸಳೆಗಳುಳ್ಳದ್ದಾಗಿ,

[11] द्वितीयः— एवमेतत् ।

[12] एते पादपशैलभग्नशिरसो मुष्टिप्रहारैर्हताः
क्रुद्धैर्वानरयूथपैरतिबलैरुत्पुच्छकर्णैर्वृताः ।
कण्ठग्राहविवृत्ततुङ्गनयनैर्दष्टोष्ठतीव्रैर्मुखैः
शैला वज्रहता इवाशु समरे [1]रक्षोगणाः पातिताः ॥

[1] रक्षोवराः

and where the tides surge with the beam-like arrows of the moon-resembling Rāma. [2]

[11] THE SECOND—Just so.

[12] These Rākṣasa troops,—their heads broken with trees and rocks, slain by blows from the fists, surrounded by the enraged monkey captains who are of great might and have their tails and ears made erect, with eyes upturned and protruding as they are strangled, and with faces fierce on account of bitten lips,—are rapidly felled in the fight, like mountains by the thunderbolt of Indra. [3]

ರಘುವರನೆಂಬ ಚಂದ್ರನ ಬಾಣಗಳೆಂಬ ಕಿರಣಗಳಿಂದ ಹೆಚ್ಚಿದ ವೇಗವುಳ್ಳದ್ದಾಗಿ (ಈ) ಯುದ್ಧಭೂಮಿಯು ಸಮುದ್ರದಂತೆ ಪ್ರಕಾಶಿಸುತ್ತಿದೆ. [೨]

[11] ಎರಡನೆಯವನು—ಅದು ನಿಜ.

[12] ಇಗೋ (ಈ ರಾಕ್ಷಸರ ಗುಂಪುಗಳು) ಮರಗಳಿಂದಲೂ ಬೆಟ್ಟಗಳಿಂದಲೂ ಮುರಿಯಲ್ಪಟ್ಟ ಕತ್ತುಗಳುಳ್ಳವರಾಗಿ ಗುದ್ದಿನ ಏಟುಗಳಿಂದ ಹತರಾಗಿದ್ದಾರೆ! ಸಿಟ್ಟಿಗೆದ್ದು ಬಾಲ ನಿಗರಿಸಿರುವ ತುಂಬ ಬಲಶಾಲಿಗಳಾದ ವಾನರ ಯೂಥಪತಿಗಳಿಂದ ಸುತ್ತುವರಿಯಲ್ಪಟ್ಟಿದ್ದಾರೆ! ಕುತ್ತಿಗೆ ಹಿಸುಕಲ್ಪಟ್ಟು ತಿರುವುಮುರುವಾಗಿ ಹೊರಕ್ಕೆ ಬಂದ ಕಣ್ಣುಗುಡ್ಡೆಗಳುಳ್ಳ ಮತ್ತು ತುಟಿ ಕಚ್ಚಿರುವುದರಿಂದ ಉಗ್ರವಾದ ಮುಖಗಳಿಂದ ಕೂಡಿದ ಈ ರಾಕ್ಷಸರ ಗುಂಪುಗಳು ವಜ್ರಾಯುಧದಿಂದ ಕೆಡವಲ್ಪಟ್ಟ ಬೆಟ್ಟಗಳಂತೆ ಅದೆಷ್ಟು ಬೇಗ ಯುದ್ಧದಲ್ಲಿ ಕೆಡವಲ್ಪಟ್ಟಿರುವುವು! [೩]

[13] तृतीयः—एते चापि द्रष्टव्या भवद्भ्याम् ;

[14] निशित-विमल-खड्गाः क्रोधविस्फारिताक्षा
विमल-विकृत-दंष्ट्रा नीलजीमूतकल्पाः ।
हरिगणपतिसैन्यं हन्तुकामाः समन्ताद्
[1]रभस-विवृत-वक्त्रा राक्षसाः [2]सम्पतन्तः ॥४॥

[15] प्रथमः—अहो तु खलु,

[16] बाणाः पात्यन्ते राक्षसैर्वानरेषु

---

[1] रभसविकृतवक्त्रा [2] सम्पतन्ति

---

[13] The Third—And these too, should be seen by both of you;

[14] With sharp and bright swords, with eyes widened by rage, with shining but hideous teeth, these demons resembling blue clouds, are rushing in from all sides, with mouths gaping in their speed, desirous of slaying the troops of the leaders of the monkey host. [4]

[15] The First—Oh, indeed!

[16] Arrows are showered by the Rakṣasas upon the monkeys;

---

[13] ಮೂರನೆಯವನು—ಇವರೂ ನಮ್ಮಿಂದ ನೋಡಲ್ಪಡಬೇಕಾದವರು—

[14] ಹರಿತವೂ ಸ್ವಚ್ಛವೂ ಆದ ಖಡ್ಗಗಳನ್ನು ಹಿಡಿದ, ಕೋಪದಿಂದ ವಿಶಾಲವಾದ ಕಣ್ಣುಗಳೂ ಶುಭ್ರವಾಗಿದ್ದರೂ ಸೊಟ್ಟಸೊಟ್ಟಗಿರುವ ಹಲ್ಲುಗಳೂ ಉಳ್ಳ, ನೀಲಿಮೋಡಗಳಂತಿರುವ, ರಭಸದಲ್ಲಿ ಬಾಯಿ ತೆರೆದಿರುವ ಈ ರಾಕ್ಷಸರು ಕಪಿದಳಪತಿಗಳ ಸೈನ್ಯವನ್ನು ಕೊಲ್ಲುವ ಇಚ್ಛೆಯುಳ್ಳವರಾಗಿ ಎಲ್ಲ ಕಡೆ ಗಳಿಂದಲೂ ಮೇಲೆರಗುತ್ತಿದ್ದಾರೆ. [೪]

[15] ಮೊದಲನೆಯವನು—ಇದೆಷ್ಟು ವಿಸ್ಮಯಕರ!

[16] ರಾಕ್ಷಸರಿಂದ ವಾನರರ ಮೇಲೆ ಬಾಣಗಳು ಸುರಿಸಲ್ಪಡುತ್ತಿವೆ.

[17] द्वितीयः— शैलाः क्षिप्यन्ते वानरैर्नैर्ऋतेषु ।
[18] तृतीयः— मुष्टिप्रक्षेपैर्जानुसङ्घट्टनैश्च
[19] सर्वे— भीमश्चित्र भोः ! सम्प्रमर्दः प्रवृत्तः ॥५॥
[20] प्रथमः—रावणमपि पश्येतां भवन्तौ,
[21] कनक-रचित-दण्डां शक्तिमुल्लालयन्तं
[1]विमल-विकृत-दंष्ट्रं स्यन्दनं वाहयन्तम् ।
उदय-शिखरि-मध्ये पूर्णबिम्बं शशाङ्कं
ग्रहमिव भगणेशं राममालोक्य रुष्टम् ॥६॥

[1] विकृतवदनदंष्ट्रं

[17] THE SECOND—Mountains are hurled by the monkeys upon the demons;
[18] THE THIRD—And with blows from fists and the intertwining of knees;
[19] ALL—Lo, a terrible and strange fight has started. [5]
[20] THE FIRST—Look both of you at Rāvaṇa,—
[21] Whirling a spear of gold handle and driving the chariot, displaying bright and hideous teeth, and furious on

[17] ಎರಡನೆಯವನು—ವಾನರರಿಂದ ರಾಕ್ಷಸರ ಮೇಲೆ ಬೆಟ್ಟಗಳೇ ಎಸೆಯಲ್ಪಡುತ್ತಿವೆ.
[18] ಮೂರನೆಯವನು—ಗುದ್ದಿನ ಹೊಡೆತಗಳಿಂದಲೂ ಮಂಡಿಗೆ ಡಿಕ್ಕಿ ಕೊಡುವುದರಿಂದಲೂ
[19] ಎಲ್ಲರೂ—ಭಯಂಕರವಾದ ತಿಕ್ಕಾಟ ಆರಂಭವಾಗಿದೆ; (ಇದು) ವಿಚಿತ್ರವಯ್ಯಾ! [೫]
[20] ಮೊದಲನೆಯವನು—ರಾವಣನನ್ನೂ ನೋಡಿ.
[21] ಚಿನ್ನದಿಂದ ರಚಿತವಾದ ಹಿಡಿಯುಳ್ಳ 'ಶಕ್ತಿ' ಆಯುಧವನ್ನು ತಿರುಗಿಸುತ್ತಾ, ರಥವನ್ನು ನಡೆಸುತ್ತಿರುವ, ಉದಯಪರ್ವತದ ಮಧ್ಯದ (ಶಿಖರದ)

22 द्वितीयः—राममपि पश्येतां भवन्तौ ।

23 सव्येन चापमवलम्ब्य करेण वीर-
मन्येन सायकवरं परिवर्तयन्तम् ।
भूमौ स्थितं रथगतं रिपुमीक्षमाणं
क्रौञ्चं यथा गिरिवरं युधि कार्तिकेयम् ॥७॥

24 तृतीयः—हहह !

---

seeing Rāma, like the planet (Rāhu) on beholding the full-orbed moon, the lord of all the stars, on the central peak of the East mount. [6]

22 THE SECOND—Behold Rāma also,—

23 Holding the bow in his left hand and turning a fierce good arrow by the other, himself standing on the ground and gazing at the foe seated in the chariot, just as the war-god (Kārtikeya) gazes in battle at the great Krauñca mountain. [7]

24 THE THIRD—Ha, ha, ha!

---

ಮೇಲಿರುವ ನಕ್ಷತ್ರರಾಜನಾದ ಪೂರ್ಣಬಿಂಬದ ಚಂದ್ರನನ್ನು ಕಂಡ ರಾಹುಗ್ರಹದಂತೆ ರಾಮನನ್ನು ಕಂಡು ಕೋಪಗೊಂಡಿರುವ, ಮತ್ತು ಸ್ವಚ್ಛವೂ ಸೊಟ್ಟಸೊಟ್ಟಗೂ ಇರುವ ಹಲ್ಲುಗಳುಳ್ಳ (ಈ ರಾವಣನನ್ನೂ ನೋಡಿ). [೬]

22 ಎರಡನೆಯವನು—ರಾಮನನ್ನೂ ನೋಡಿ—

23 ಎಡಗೈಯಲ್ಲಿ ಧನುಸ್ಸನ್ನು ಹಿಡಿದು, ಇನ್ನೊಂದು ಕೈಯಿಂದ ವೀರೋಚಿತವಾದ ಉತ್ತಮವಾದ ಬಾಣವೊಂದನ್ನು ತಿರುಗಿಸುತ್ತಾ, ತಾನು ನೆಲದ ಮೇಲೆ ನಿಂತೇ ರಥದಲ್ಲಿರುವ ಶತ್ರುವನ್ನು ನೋಡುತ್ತಾ, ಯುದ್ಧದಲ್ಲಿ ಕ್ರೌಂಚಪರ್ವತವನ್ನು ನೋಡುತ್ತಿದ್ದ ಕಾರ್ತಿಕೇಯನಂತಿರುವ (ರಾಮನನ್ನೂ ನೋಡಿ).

24 ಮೂರನೆಯವನು—ಹಹಹ!

[25] रावणेन विमुक्तेयं शक्तिः कालान्तकोपमा ।
रामेण स्मयमानेन द्विधा छिन्ना धनुष्मता ॥८॥

[26] प्रथमः—
शक्तिं निपातितां दृष्ट्वा क्रोधविस्फारितेक्षणः ।
रामं प्रत्यैषवं वर्षमभिवर्षति रावणः ॥९॥

[27] द्वितीयः—अहो रामस्य शोभा !

[28] एता रावणजीमूताद्बाणधारा विनिस्सृताः ।
विभान्ति राममासाद्य वारिधारा वृषं यथा ॥१०॥

---

[25] This spear, resembling Death and hurled by Rāvaṇa, has been split into two by the smiling archer Rāma. [8]

[26] The First—Beholding his spear hit down, Rāvaṇa, with eyes widened by rage, is pouring a shower of arrows upon Rāma. [9]

[27] The Second—Ah, the beauty of Rāma!

[28] These arrow-showers pouring down from the cloud, viz., Rāvaṇa, and falling on Rāma, look like the showers of water pouring on a bull. [10]

---

[25] ರಾವಣನಿಂದ ಎಸೆಯಲ್ಪಟ್ಟ, ಕಾಲಾಂತಕನನ್ನು ಹೋಲುವ 'ಶಕ್ತಿ' ಆಯುಧವು ನಗುತ್ತಿರುವ ಬಿಲ್ಲುಗಾರನಾದ ರಾಮನಿಂದ ಎರಡಾಗಿ ತುಂಡರಿಸಲ್ಪಟ್ಟಿತು ! [೮]

[26] ಮೊದಲನೆಯವನು—'ಶಕ್ತಿ' ಆಯುಧ ಕೆಡವಲ್ಪಟ್ಟುದನ್ನು ಕಂಡು ಕಡುಕೋಪದಿಂದ ಅಗಲವಾದ ಕಣ್ಣುಗಳುಳ್ಳ ರಾವಣನು ರಾಮನ ಮೇಲೆ ಬಾಣಗಳ ಮಳೆಯನ್ನೇ ಸುರಿಸುತ್ತಿದ್ದಾನೆ. [೯]

[27] ಎರಡನೆಯವನು—ರಾಮನ ಸೊಬಗು ಅದೆಷ್ಟು ಆಶ್ಚರ್ಯಕರ!

[28] ರಾವಣನೆಂಬ ಮೋಡದಿಂದ ಹೊರಹೊರಟ ಈ ಬಾಣಧಾರೆಗಳು ರಾಮನನ್ನು ಸೇರಿ, ವೃಷಭದ ಮೇಲೆ ಬೀಳುವ ನೀರಿನ ಧಾರೆಗಳಂತೆ ಕಂಗೊಳಿಸುತ್ತಿವೆ. [೧೦]

[29] तृतीयः—एष एषः;

[30] कनकरचित-चापं तीक्ष्णमुद्यम्य शीघ्रं
रणशिरसि सुघोरं बाणजालं विधून्वन् ।
रथगतमभियान्तं रावणं याति पद्भ्यां
गजपतिमिव मत्तं तीक्ष्णदंष्ट्रो मृगेन्द्रः ॥११॥

[31] सर्वे—अये, ज्वलित इव प्रभयायं देशः ! किन्नु खल्विदम् ?

[32] प्रथमः — आ ! युद्धसामान्यजनितशङ्केन महेन्द्रेण प्रेषितो मातलिवाहितो रथः ।

---

[29] THE THIRD—And here, (he),

[30] Swiftly raising his fierce bow made of gold and throwing out a dreadful net work of arrows in the van of the fight, advances on foot towards Rāvaṇa mounted on a chariot and rushing against him like a sharp-toothed lion advancing towards a rutting tusker. [11]

[31] ALL—Ey, this place is lit up, as it were, with a radiance. What could this be?

[32] THE FIRST—Ah! It is the chariot driven by Mātali

---

[29] ಮೂರನೆಯವನು—ಇಗೋ ಈ (ರಾಮನು)

[30] ಚಿನ್ನದಿಂದಾದ ಉಗ್ರವಾದ ಧನುಸ್ಸನ್ನು ಬಲು ಬೇಗ ಎತ್ತಿಕೊಂಡು ಯುದ್ಧದ ಮುನ್ನಾಲುಗಳಲ್ಲಿ ತುಂಬ ಘೋರವಾದ ಬಾಣಜಾಲಗಳನ್ನೇ ಬೀಸುತ್ತಾ, ರಥದಲ್ಲಿ ಕುಳಿತು ಮೇಲೇರಿ ಬರುತ್ತಿರುವ ರಾವಣನಿಗಿದಿರಾಗಿ, ಬರಿಯ ಕಾಲಿನಿಂದಲೇ ಸಾಗುತ್ತಿದ್ದಾನೆ,—ಮದಿಸಿದ ಸಲಗನನ್ನು ತೀಕ್ಷ್ಣವಾದ ಕೋರೆ ಹಲ್ಲಿನ ಸಿಂಹವು ಇದಿರಿಸಿ ಹೋಗುವಂತೆ. [೧೧]

[31] ಎಲ್ಲರೂ—ಅಯೇ! ಈ ಪ್ರದೇಶವು ಪ್ರಭೆಯಿಂದ ಪ್ರಕಾಶಗೊಂಡಂತಿದೆ! ಇದೇನಿದು ?

[32] ಮೊದಲನೆಯವನು—ಆ! (ಇದು) ಮಾತಲಿಯೇ ನಡೆಸುತ್ತಿರುವ

33 द्वितीयः—उपस्थितं मातलिं दृष्ट्वा तस्य वचनाद्रथमारूढवान् रामः ।
34 तृतीयः—एष हि,

35 सुरवर-जय-दर्प-देशिकेऽस्मिन्[1]
दितिसुत-नाशकरे रथे विभाति ।
रजनिचर-विनाश-कारणः[2] सन्
त्रिपुरवधाय यथा पुरा कपर्दी ॥१२॥

36 प्रथमः—अहो महत् प्रवृत्तं युद्धम् ।

---

[1] सुरवरविजयप्रदेशिकेऽस्मिन् [2] ०विनाशकारणेऽस्मिंस्त्रिपुर०

---

and sent by the great Indra who is apprehensive as the fight is so equal!

33 THE SECOND — Seeing Mātali standing by his side, Rāma has mounted the chariot, on his words.

34 THE THIRD—And he,

35 Being instrumental to the demon's destruction, shines in this chariot which is the destroyer of Diti's children and the guide for Indra's victory and valour, just like S'iva (who shone) before at the massacre of the Three Cities. [12]

36 THE FIRST--Oh! a great fight has come up!

---

ರಥ! ಯುದ್ಧವು ಸಮನಾಗಿ ಸಾಗುತ್ತಿರುವುದರಿಂದ ಹೆದರಿಕೆ ಉಂಟಾದ ಮಹೇಂದ್ರನಿಂದ ಕಳುಹಿಸಲ್ಪಟ್ಟಿರುವುದು.

33 ಎರಡನೆಯವನು—ಹತ್ತಿರ ಬಂದ ಮಾತಲಿಯನ್ನು ಕಂಡು, ಅವನ ಮಾತಿನ ಮೇಲೆ ರಾಮನು ರಥಾರೂಢನಾಗಿದ್ದಾನೆ.

34 ಮೂರನೆಯವನು—ಇಗೋ ಈತ—

35 ಇಂದ್ರನಿಗೆ ಜಯವನ್ನೂ ದರ್ಪವನ್ನೂ ಉಂಟುಮಾಡತಕ್ಕ ಮತ್ತು ದೈತ್ಯರನ್ನು ನಾಶಮಾಡತಕ್ಕ ಈ ರಥದಲ್ಲಿ ನಿಶಾಚರನ ನಾಶಕ್ಕೆ ಕಾರಣನಾಗಿ, ಪ್ರಕಾಶಿಸುತ್ತಿದ್ದಾನೆ,—ಹಿಂದೆ ತ್ರಿಪುವರವಧಕ್ಕೆ ತೊಡಗಿದ ಶಿವನಂತೆ. [೧೨]

36 ಮೊದಲನೆಯವನು—ಅಹೋ ದೊಡ್ಡ ಯುದ್ಧವೇ ಆರಂಭವಾಯಿತು!

37 शरवर-परिपीत-तीव्रबाणं नरवर-नैर्ऋतयोः समीक्ष्य युद्धम् ।
चिरत-विविध-शस्त्रपातमेते हरिवर-राक्षस-सैनिकाः स्थिताश्च ॥

38 द्वितीयः—अहो तु खलु,

39 चारीभिरेतौ परिवर्तमानौ रथे स्थितौ बाणगणान् वमन्तौ ।
स्वरश्मिजालैर्धरणिं दहन्तौ सूर्याविव द्वौ नभसि भ्रमन्तौ ॥

40 तृतीयः— रावणमपि पश्येतां भवन्तौ ।

---

37 These soldiers of the monkey-chief and of the demon having given up the hurling of different weapons, stand simply gazing at the fight between the demon and the king of men, wherein the sharp arrows (of one) are swallowed by the excellent shafts (of the other). [13]

38 The Second—Ah, indeed!

39 These two seated in chariots moving round with war-like motion, and discharging flights of arrows, are like two Suns wandering in the sky, scorching the earth through the net-works of their rays. [14]

40 The Third—Both of you look at Rāvaṇa also, who,

---

37 ವೀರ ಮಾನವನಿಗೂ ರಾಕ್ಷಸನಿಗೂ ಮಧ್ಯೆ ಒಬ್ಬನ ಶ್ರೇಷ್ಠವಾದ ಶರಗಳು ಮತ್ತೊಬ್ಬನ ತೀವ್ರವಾದ ಬಾಣಗಳನ್ನು ನುಂಗುತ್ತಾ ನಡೆಯುತ್ತಿರುವ ಯುದ್ಧವನ್ನು ಕಂಡು ವಿವಿಧವಾದ ಶಸ್ತ್ರಪ್ರಹಾರಗಳನ್ನು ನಿಲ್ಲಿಸಿ ಈ ಕಪಿಮುಖ್ಯರ ಮತ್ತು ರಾಕ್ಷಸರ ಸೈನಿಕರು (ಬೆರಗಾಗಿ) ನಿಂತುಬಿಟ್ಟಿದ್ದಾರೆ. [೧೩]

38 ಎರಡನೆಯವನು—ಏನಾಶ್ಚರ್ಯ!

39 ರಥಗಳಲ್ಲಿ ಕುಳಿತು 'ಚಾರೀ' ಕ್ರಮದಿಂದ ವರ್ತುಳಾಕಾರವಾಗಿ ಸುತ್ತುತ್ತಾ, ಬಾಣರಾಶಿಗಳನ್ನೇ ಹೊರಗೆಡವುತ್ತಿರುವ ಇವರಿಬ್ಬರೂ ಆಕಾಶದಲ್ಲಿ ಸುತ್ತುತ್ತಾ ತಮ್ಮ ಕಿರಣಜಾಲಗಳಿಂದ ಭೂಮಿಯನ್ನು ಸುಡುತ್ತಿರುವ ಇಬ್ಬರು ಸೂರ್ಯರಂತೆ ಇದ್ದಾರೆ. [೧೪]

40 ಮೂರನೆಯವನು—ರಾವಣನನ್ನು ನೋಡಿ—

[41] शरैर्भीमवेगैर्हयान् मर्दयित्वा ध्वजं चापि शीघ्रं बलेनाभिहत्य ।
महद्बाणवर्षं सृजन्तं नदन्तं हसन्तं नृदेवं भृशं भीषयन्तम् ॥

[42] प्रथमः—एष हि रामः,

[43] स्थानाक्रामण-वामनीकृत-तनुः किञ्चित् समाश्वास्य वै
तीव्रं बाणमवेक्ष्य रक्तनयनो मध्याह्नसूर्यप्रभः ।
व्यक्तं मातलिना स्वयं नरपतिर्दत्तास्पदो वीर्यवान्
क्रुद्धः संहितवान् वरास्त्रममितं पैतामहं पार्थिवः ॥१६॥

---

[41] Having hit down the horses with arrows of terrible speed and swiftly having attacked the banner by force, has been roaring and creating a great shower of arrows and is trying much to frighten the lord of men who is smiling.

[42] The First—Here is Rāma—

[43] His body is dwarfed as he stands firm repelling a charge; and after taking breath a little, seeing a pointed arrow, he is with blood-red eyes glowing like the mid-day sun; the heroic lord of men is now openly given a clear course by

---

[41] ಭಯಂಕರವಾದ ವೇಗವುಳ್ಳ ಬಾಣಗಳಿಂದ ಕುದುರೆಗಳನ್ನು ಮರ್ದಿಸಿ, ಧ್ವಜದ ಮೇಲೂ ಬಲ ಪ್ರಯೋಗದಿಂದ ಶೀಘ್ರವಾಗಿ ಧಾಳಿಮಾಡಿ, ಬಾಣಗಳ ದೊಡ್ಡ ಮಳೆಯನ್ನೇ ಸೃಷ್ಟಿಸುತ್ತಾ, ಕುಣಿಯುತ್ತಾ, ನಗುತ್ತಿರುವ ನರಪತಿ ರಾಮನನ್ನು ವಿಶೇಷವಾಗಿ ಹೆದರಿಸುತ್ತಾ (ಇರುವ ರಾವಣನನ್ನೂ ನೋಡಿ).

[42] ಮೊದಲನೆಯವನು—ಈ ರಾಮನಾದರೋ—

[43] ನಿಂತಲ್ಲೇ ಆಕ್ರಮಣವನ್ನೆದುರಿಸಲು ಕುಳ್ಳಾಗಿ ಅಡಗಿಸಿಕೊಂಡ ದೇಹವುಳ್ಳವನಾಗಿದ್ದಾನೆ; ಸ್ವಲ್ಪ ಚೇತರಿಸಿಕೊಂಡು, ತೀವ್ರವಾದ ಬಾಣ (ಬರುತ್ತಿರುವುದನ್ನು) ಕಂಡು ಕಣ್ಣು ಕೆಂಪಾಗಿ ಮಧ್ಯಾಹ್ನದ ಸೂರ್ಯನಂತೆ ಜ್ವಲಿಸುತ್ತಿದ್ದಾನೆ; ವೀರ್ಯಶಾಲಿಯಾದ ನರಪತಿಯು ಸ್ವಯಂ ಮಾತಲಿಯಿಂದ ವ್ಯಕ್ತವಾಗಿಯೇ

44 द्वितीयः—एतदस्त्रम्,

45 रघुवरभुजवेग-विप्रमुक्तं ज्वलन-दिवाकर-युक्त-तीक्ष्णधारम्।
रजनिचरवरं निहत्य सङ्ख्ये पुनरभिगच्छति राममेव शीघ्रम्॥

46 सर्वे—हन्त [1]निपातितो रावणः!

47 प्रथमः—रावणं निहतं दृष्ट्वा पुष्पवृष्टिर्निपातिता[2]।
एता नदन्ति गम्भीरं भेर्यस्त्रिदिवसद्मनाम्[3]॥१८॥

---

[1] पतितो.... [2] ०दिवश्च्युता [3] भेर्यस्त्रिदिववर्त्मसु

---

Mātali himself; and getting enraged, the king has fixed the unrivalled excellent missile presided over by Brahma. [16]

44 The Second—This missile,

45 Discharged by the force of Rāma's arm, its sharp edge associated with Fire and Sun, will soon come back to Rāma himself, after slaying the demon-king in battle. [17]

46 All—Ah, Rāvaṇa is hit down!

47 The First—Seeing Rāvaṇa hit down, a shower of flowers has poured down; and these drums of gods are roaring loudly. [18]

---

ಅವಕಾಶಕೊಡಲ್ಪಟ್ಟವನಾಗಿದ್ದಾನೆ; ಭೂಪಾಲನಾದ ರಾಮನು ಕೋಪಗೊಂಡವನಾಗಿ ಅಮಿತವೂ ಶ್ರೇಷ್ಠವೂ ಆದ ಬ್ರಹ್ಮಾಸ್ತ್ರದ ಸಂಧಾನಮಾಡಿಬಿಟ್ಟದ್ದಾನೆ.

44 ಎರಡನೆಯವನು—ಈ ಅಸ್ತ್ರವೋ—

45 ರಘುವರನ ಭುಜಗಳ ವೇಗದಿಂದ ಬಿಡಲ್ಪಟ್ಟು, ಅಗ್ನಿ ಮತ್ತು ಸೂರ್ಯರಿಂದ ಕೂಡಿಕೊಂಡ ಹರಿತವಾದ ಅಲಗುಳ್ಳದ್ದಾಗಿ, ಯುದ್ಧದಲ್ಲಿ ರಾಕ್ಷಸೇಂದ್ರನನ್ನು ಕೊಂದು ಪುನಃ ರಾಮನನ್ನೇ ಶೀಘ್ರವಾಗಿ ಬಂದು ಸೇರುತ್ತಿದೆ. [೧೭]

46 ಎಲ್ಲರೂ—ಅಯ್ಯೋ! ರಾವಣ ಕೆಳಕ್ಕೆ ಕೆಡವಲ್ಪಟ್ಟ!

47 ಮೊದಲನೆಯವನು—ರಾವಣ ನಿಹತನಾದುದನ್ನು ಕಂಡು ಹೂ ಮಳೆ ಸುರಿಯಲ್ಪಟ್ಟದೆ. ಇಗೋ ದೇವದುಂದುಭಿಗಳು ಗಂಭೀರವಾಗಿ ಮೊಳಗುತ್ತಿವೆ.

[48] द्वितीयः—भवतु । सिद्धं देवकार्यम् !

[49] प्रथमः—तदागम्यताम् । वयमपि तावत्सर्वहितं रामं संभावयिष्याम: ।

[50] उभौ—बाढम् । प्रथम: कल्प: । ( निष्क्रान्ताः सर्वे)

[51] विष्कम्भकः[1]

[52] (ततः प्रविशति रामः)

[53] रामः—हत्वा रावणमाहवेऽद्य तरसा मद्बाणवेगार्दितं
कृत्वा चापि विभीषणं शुभमतिं लङ्केश्वरं साम्प्रतम् ।

---

[1] इति षष्ठोऽङ्कः

---

[48] THE SECOND—Well; the task of the gods has been accomplished.

[49] THE FIRST—Come along, then. We also shall greet Rāma, the benefactor of all.

[50] BOTH—Well; an excellent idea. *( Exeunt omnes )*

[51] END OF THE PRELUDE

[52] *( Then enters Rāma )*

[53] RĀMA — Very soon having slain Rāvaṇa who was hurt by the force of my shafts in battle to day, having also

---

[48] ಎರಡನೆಯವನು—ಒಳ್ಳೆಯದು ; ದೇವಕಾರ್ಯ ಸಿದ್ಧಿಸಿತು !

[49] ಮೊದಲನೆಯವನು—ಆದ್ದರಿಂದ ಬಾ. ನಾವೂ ಸರ್ವಹಿತ (ಸಾಧಕ) ನಾದ ರಾಮನನ್ನು ಆದರಿಸೋಣ.

[50] ಇಬ್ಬರೂ—ಆಗಲಿ, ಉತ್ತಮ ಕಲ್ಪ. (ಎಲ್ಲರೂ ಹೋಗುತ್ತಾರೆ)

[51] ಇಂತು ವಿಷ್ಕಂಭಕ

[52] (ಬಳಿಕ ರಾಮನು ಪ್ರವೇಶಿಸುತ್ತಾನೆ)

[53] ರಾಮ—ಯುದ್ಧದಲ್ಲಿಂದು ನನ್ನ ಬಾಣವೇಗದಿಂದ ಪೀಡಿತನಾಗಿದ್ದ ರಾವಣನನ್ನು ಬೇಗ ಕೊಂದು, ಮತ್ತು ಶುಭಮತಿಯಾದ ವಿಭೀಷಣನನ್ನು

तीर्त्वा चैवमनल्पसत्त्वचरितं दोर्भ्यां प्रतिज्ञार्णवं
लङ्कामभ्युपयामि बन्धुसहितः [1]सीतां समाश्वासितुम् ॥

54 (प्रविश्य) लक्ष्मणः—जयतु आर्यः ! आर्य ! एषा ह्यार्यायस्य समीपमुपसर्पति ।

55 रामः—वत्स लक्ष्मण !

56 अपायाच्च[2] हि वैदेह्या उषिताया रिपुक्षये ।
दर्शनात् सांप्रतं धैर्यं मन्युर्मे वारयिष्यति ॥२०॥

---

[1] सीतासमाश्वासने [2] अपायश्च हि

---

made the virtuous-minded Vibhīṣaṇa lord of Laṅkā now, and having thus swam with both my arms across the ocean of vows of no insignificant spirited deeds (—roamings of sea-creatures—), I shall proceed together with my relatives to Laṅkā in order to console Sītā. [19]

54 *(Entering)* Lakṣmaṇa–Victory to my brother! Brother, my noble sister-in-law is approaching you here.

55 Rāma—-Dear Lakṣmaṇa,

56 Because of her misfortune, anger checks my courage now from beholding Vaidehī who has dwelt in the house of an enemy. [20]

---

ಈಗ ಲಂಕೇಶ್ವರನನ್ನಾಗಿ ಮಾಡಿ, ಹೀಗೆಯೇ ಸ್ವಲ್ಪವಲ್ಲದ ಸತ್ವಚರಿತಗಳುಳ್ಳ ಪ್ರತಿಜ್ಞಾಸಾಗರವನ್ನುಎರಡು ತೋಳುಗಳಿಂದಲೂ (ಈಜಿ) ದಾಟಿ, ಸೀತೆಯನ್ನು ಸಂತೈಸುವುದಕ್ಕಾಗಿ ಬಂಧುಸಹಿತನಾಗಿ ಲಂಕಾಭಿಮುಖವಾಗಿ ಹೋಗುತ್ತಿದ್ದೇನೆ.

54 (ಪ್ರವೇಶಿಸಿ) ಲಕ್ಷ್ಮಣ — ಆರ್ಯನಿಗೆ ಜಯವಾಗಲಿ. ಆರ್ಯ, ಇಗೋ ಆರ್ಯೆಯೇ ಆರ್ಯನ ಸಮೀಪಕ್ಕೆ ಬರುತ್ತಿದ್ದಾಳೆ.

55 ರಾಮ— ವತ್ಸ ಲಕ್ಷ್ಮಣ !

56 ಶತ್ರುವಿನ ಮನೆಯಲ್ಲಿ ವಾಸಮಾಡಿದ ವೈದೇಹಿಯ ದುರದೃಷ್ಟದಿಂದಲೂ ಕೂಡ ಅವಳನ್ನು ನೋಡದಂತೆ (ನನ್ನ) ಕೋಪ ನನ್ನ ಧೈರ್ಯವನ್ನು ತಡೆಯುತ್ತಿದೆ. [೨೦]

57 लक्ष्मणः—यदाज्ञापयत्यार्यः । (निष्क्रान्तः)

58 (प्रविश्य) विभीषणः—जयतु देवः !

59 एषा हि राजंस्तव धर्मपत्नी त्वद्बाहुवीर्येण विधूतदुःखा ।
लक्ष्मीः पुरा दैत्यकुलच्युतेव तव प्रसादात् समुपस्थिता सा ॥

60 रामः — विभीषण ! तत्रैव तावत्तिष्ठतु रजनिचरावमर्शजातकल्मषा [1]इक्ष्वाकुकुलस्याङ्कभूता राजानं दशरथं पितरमुद्दिश्य न युक्तं भो लङ्काधिपते ! मां द्रष्टुम्[2] । अपि च,

---

[1] a इक्ष्वाकुलन्यङ्कभूता; b इक्ष्वाकुकुलावमानसमुच्यतपताकाभूता [2] वक्तुम्

---

57 LAKṢMAṆA—As my brother commands. *(Exit)*

58 *(Entering)* VIBHĪṢAṆA—Victory to my lord!

59 Here has come, O king! that faithful wife of yours, whose misery has been removed by the valour of your arms and who is like goddess Lakṣmī formerly released from the demon's house, by your favour. [21]

60 RĀMA—Vibhīṣaṇa, let her stay here alone; sullied by the contact of the demon, she has become a stigma on the Ikṣvāku family. O lord of Laṅkā, with due regard to king Das'aratha, my father, it is not proper that she should see me. Moreover—

---

57 ಲಕ್ಷ್ಮಣ—ಆರ್ಯನ ಅಪ್ಪಣೆಯಂತೆ. (ಹೋಗುತ್ತಾನೆ)

58 (ಪ್ರವೇಶಿಸಿ) ವಿಭೀಷಣ—ದೇವನಿಗೆ ಜಯವಾಗಲಿ.

59 ರಾಜನೇ, ನಿನ್ನ ಬಾಹುಗಳ ವೀರ್ಯದಿಂದ ಪರಿಹೃತವಾದ ದುಃಖವುಳ್ಳ ನಿನ್ನ ಧರ್ಮಪತ್ನಿಯು ಇಗೋ ನಿನ್ನ ಅನುಗ್ರಹದಿಂದ ಬಂದಿದ್ದಾಳೆ,— ಹಿಂದೆ ದೈತ್ಯ ಕುಲದೊಳಗೆ ಸಿಕ್ಕಿಕೊಂಡಿದ್ದ ಲಕ್ಷ್ಮಿಯು (ಪುನಃ ನಾರಾಯಣನಲ್ಲಿಗೆ) ಬಂದ ಹಾಗೆ. [೨೧]

60 ರಾಮ – ವಿಭೀಷಣ, ರಾಕ್ಷಸನ ಸ್ಪರ್ಶದಿಂದುಂಟಾದ ಕಲ್ಮಷವುಳ್ಳವಳೂ ಇಕ್ಷ್ವಾಕುಕುಲಕ್ಕೆ ಕಳಂಕಪ್ರಾಯಳೂ ಆದ ಅವಳು ಅಲ್ಲಿಯೇ ನಿಲ್ಲಲಿ. ನನ್ನ

[61] मज्जमानमकार्येषु पुरुषं विषयेषु वै ।
निवारयति यो राजन् स मित्रं रिपुरन्यथा ॥२२॥

[62] विभीषणः—प्रसीदतु देवः ।

[63] रामः—नार्हति भवानतः परं पीडयितुम् ।

[64] (प्रविश्य) लक्ष्मणः—जयत्वार्यः ! आर्यस्याभिप्रायं श्रुत्वैवाग्नि-प्रवेशाय प्रसादं प्रतिपालयत्यार्या ।

[65] रामः—लक्ष्मण ! अस्याः पतिव्रतायाश्छन्दमनुतिष्ठ ।

---

[61] O king! one who prevents a person from being merged in unworthy objects of the senses is a friend; contrary to this, (he) is a foe. [22]

[62] VIBHĪṢAṆA—May it please you, my lord!

[63] RĀMA—You should not trouble me any further.

[64] (*Entering*) LAKṢMAṆA—Victory to my brother! Just after hearing your intention, sister-in-law awaits your permission to enter into fire.

[65] RĀMA—Lakṣmaṇa, act as per the wish of her who is devoted to her husband.

---

ತಂದೆ ದಶರಥರಾಜನನ್ನುದ್ದೇಶಿಸಿಯಾದರೂ ಅವಳು ನನ್ನನ್ನು ನೋಡುವುದು ಯುಕ್ತವಲ್ಲ, ಎಲೌ ಲಂಕಾಧಿಪತಿಯೇ! ಮತ್ತು

[61] ಅಕಾರ್ಯಗಳಲ್ಲೂ ವಿಷಯಸುಖಗಳಲ್ಲೂ ಮುಳುಗಿ ಹೋಗುತ್ತಿರುವವನನ್ನು ಯಾವನು ತಡೆಯುತ್ತಾನೋ ಅವನೇ ಮಿತ್ರ; ಅನ್ಯಪ್ರಕಾರವಾಗಿ ತಡೆಯುವವನು ಶತ್ರು. [೨೨]

[62] ವಿಭೀಷಣ—ದೇವನು ಪ್ರಸನ್ನನಾಗಲಿ.

[63] ರಾಮ—ನೀನು ಇನ್ನು ಹೆಚ್ಚಾಗಿ ಪೀಡಿಸಬಾರದು.

[64] (ಪ್ರವೇಶಿಸಿ) ಲಕ್ಷ್ಮಣ—ಆರ್ಯನಿಗೆ ಜಯವಾಗಲಿ. ಆರ್ಯನ ಅಭಿಪ್ರಾಯವನ್ನು ಕೇಳಿ ತಿಳಿದು, ಆರ್ಯೆ ಅಗ್ನಿಪ್ರವೇಶಮಾಡಲು (ಆರ್ಯನ) ಅನುಮತಿಯನ್ನು ಎದುರು ನೋಡುತ್ತಿದ್ದಾಳೆ.

[65] ರಾಮ—ಲಕ್ಷ್ಮಣ, ಪತಿವ್ರತೆಯಾದ ಅವಳ ಇಷ್ಟದಂತೆ ಆಚರಿಸು.

66 लक्ष्मणः—यदाज्ञापयत्यार्यः । ([1]परिक्रम्य) भोः कष्टम् !

67 विज्ञाय देव्याः शौचं च श्रुत्वा चार्यस्य शासनम् ।
धर्मस्नेहान्तरे न्यस्ता बुद्धिर्दोलायते मम ॥२३॥

68 कोऽत्र ?

69 (प्रविश्य) हनूमान्—जयतु कुमारः !

70 लक्ष्मणः—हनूमन् ! यदि ते शक्तिरस्ति, एवमाज्ञापयत्यार्यः ।

71 हनूमान्—अत्र किं तर्कयति कुमारः ?

---

[1] किञ्चिद्गत्वा

---

66 LAKṢMAṆA–As my brother bids. *(Walking along)* O alas!

67 Knowing the chasity of the queen and also hearing my brother's command, my mind, placed betwixt duty and affection, is swinging. [23]

68 Oh, who is there?

69 *( Entering )* HANŪMĀN—Victory to the prince!

70 LAKṢMAṆA—Hanūman, if you are able ( tell me what to do) ; thus orders my brother.

71 HANŪMĀN—What does the prince consider in this?

---

66 ಲಕ್ಷ್ಮಣ—ಆರ್ಯನ ಅಪ್ಪಣೆಯಂತೆ. (ಮುಂದೆ ಹೋಗಿ) ಭೋಃ! ಕಷ್ಟ.

67 ದೇವಿಯ ಪರಿಶುದ್ಧತೆಯನ್ನು ತಿಳಿದೂ ಆರ್ಯನ ಶಾಸನವನ್ನು ಕೇಳಿಯೂ ನನ್ನ ಬುದ್ಧಿಯು ಧರ್ಮ-ಸ್ನೇಹಗಳ ಮಧ್ಯೆ ಬಿದ್ದು ತೂಗಾಡುತ್ತಿದೆ.

68 ಯಾರಿಲ್ಲಿ?

69 (ಪ್ರವೇಶಿಸಿ) ಹನೂಮಾನ್—ಕುಮಾರನಿಗೆ ಜಯವಾಗಲಿ!

70 ಲಕ್ಷ್ಮಣ—ಹನುಮಂತ, ನಿನಗೆ ಸಾಮರ್ಥ್ಯವಿದ್ದರೆ (ಏನು ಮಾಡಲಿ ಹೇಳು),—ಆರ್ಯನು ಹೀಗೆ ಅಪ್ಪಣೆಮಾಡಿದ್ದಾನೆ.

71 ಹನೂಮಾನ್—ಇದರಲ್ಲಿ ಕುಮಾರನು ವಿಚಾರಮಾಡಬೇಕಾದ್ದೇನು?

72 लक्ष्मणः—निष्फलो मम तर्कः । [1]अथवा वयमार्यस्याभिप्राय-मनुवर्तितारः । गच्छामस्तावत् ।

73 हनूमान्—यदाज्ञापयति कुमारः । (निष्क्रान्तौ)

74 ([3]प्रविश्य) लक्ष्मणः—प्रसीदत्वार्यः । आर्य ! आश्चर्यमाश्चर्यम् । एषा ह्यार्या,

75 विकसितशतपत्रदामकल्पा ज्वलनमिहाशु विमुक्तजीविताशा ।
श्रममिह तव निष्फलं च कृत्वा प्रविशति पद्मवनं यथैव हंसी ॥

---

[1] ननु वयमार्यस्याभिप्रायमनुवर्तयितारः; ०वर्तयिष्यामः [2] तथा कृत्वा, प्रविश्य

---

72 LAKṢMAṆA—My consideration is in vain. Or, we are only to carry out the intention of my noble brother. We shall go.

73 HANŪMĀN—As the prince bids. *( Exeunt ambo )*

74 *(Entering )* LAKṢMAṆA—May it please you brother! Brother, a very great wonder! My noble sister-in-law here,

75 Resembling almost a garland of full-blown lotuses, rendering all your efforts purposeless and abandoning all hopes of life, is entering swiftly into the fire here, just as a female swan enters into a lotus grove. [24]

---

72 ಲಕ್ಷ್ಮಣ—ನನ್ನ ವಿಚಾರ ನಿಷ್ಫಲ. ಅಥವಾ ನಾವು ಆರ್ಯನ ಅಭಿಪ್ರಾಯವನ್ನೇ ಅನುಸರಿಸುವವರು.—ಹೋಗೋಣ, (ನಡೆ).

73 ಹನೂಮಾನ್—ಕುಮಾರನ ಅಪ್ಪಣೆಯಂತೆ. (ಇಬ್ಬರೂ ಹೋಗುತ್ತಾರೆ)

74 (ಪ್ರವೇಶಿಸಿ) ಲಕ್ಷ್ಮಣ — ಆರ್ಯನು ಪ್ರಸನ್ನನಾಗಬೇಕು. ಆರ್ಯ! ಆಶ್ಚರ್ಯ, ಆಶ್ಚರ್ಯ! ಇಗೋ, ಆರ್ಯಳಾದರೋ—

75 ಅರಳಿದ ಶತಪತ್ರಕಮಲದ ದಂಡೆಯಂತಿರುವ (ಆರ್ಯೆ) ಜೀವಿತದ ಆಸೆಯನ್ನು ತೊರೆದು, ನೀನಿಲ್ಲಿ ಪಟ್ಟ ಶ್ರಮವನ್ನು ನಿಷ್ಫಲಗೊಳಿಸಿ, ಬೆಂಕಿಯೊಳಕ್ಕೆ ತ್ವರಿತವಾಗಿ ಪ್ರವೇಶಿಸುತ್ತಿದ್ದಾಳೆ,—ಹೆಣ್ಣು ಹಂಸವು ಪದ್ಮವನವನ್ನು ಪ್ರವೇಶಿಸುವಂತೆ. [೨೪]

76 रामः—आश्चर्यमाश्चर्यम् । लक्ष्मण ! निवारय,निवारय ।

77 लक्ष्मणः — यदाज्ञापयत्यार्यः ।

78 (प्रविश्य) हनूमान्—जयतु देवः ।

79 एषा कनकमालेव [1]ज्वलनाद्वर्धितप्रभा ।
पावना पावकं प्राप्य निर्विकारमुपागता ॥२५॥

80 रामः—( सविस्मयम् ) किमिति, किमिति ?

81 लक्ष्मणः—अहो आश्चर्यम् !

---

[1] पवनावर्धितप्रभात् । पावकात्पावनं प्राप्य....

---

76 RĀMA—Really a great wonder! Lakṣmaṇa, prevent, prevent (her).

77 LAKṢMAṆA—As my brother bids.

78 *( Entering )* HANŪMĀN—Hail, my lord!

79 This pure lady, like a gold necklace, having gained contact with the purifying fire, unaffected has come out with lustre increased by the flames. [25]

80 RĀMA—*( Astonished )* What, what is it?

81 LAKṢMAṆA—Oh, wonder!

---

76 ರಾಮ—ಆಶ್ಚರ್ಯ, ಆಶ್ಚರ್ಯ! ಲಕ್ಷ್ಮಣ, ತಡೆ; ಅವಳನ್ನು ತಡೆ.

77 ಲಕ್ಷ್ಮಣ—ಆರ್ಯನ ಅಪ್ಪಣೆಯಂತೆ.

78 (ಪ್ರವೇಶಿಸಿ) ಹನೂಮಾನ್—ದೇವನಿಗೆ ಜಯವಾಗಲಿ!

79 ಪಾವನೆಯಾದ ಈ (ಆರ್ಯೆ), ಬೆಂಕಿಯ ಉರಿಯಿಂದ ಪ್ರಭೆ ಹೆಚ್ಚಿದ ಚಿನ್ನದ ಮಾಲೆಯಂತೆ, ಬೆಂಕಿಯ ಸ್ಪರ್ಶಹೊಂದಿ (ಅದರ) ಉರಿಯಿಂದ ಕಾಂತಿ ಹೆಚ್ಚಿದವಳಾಗಿ ನಿರ್ವಿಕಾರಳಾಗಿ (ಹೊರ) ಬಂದಿದ್ದಾಳೆ. [೨೫]

80 ರಾಮ—(ವಿಸ್ಮಯದಿಂದ) ಏನು, ಏನು?

81 ಲಕ್ಷ್ಮಣ—ಅಹೋ! ಆಶ್ಚರ್ಯ!

82 (प्रविश्य) [1]सुग्रीवः—जयतु देवः !

83 को नु खल्वेष जीवन्तीमादाय जनकात्मजाम् ।
प्रणम्यरूपः सम्भूतो ज्वलतो हव्यवाहनात् ॥२६॥

84 लक्ष्मणः — अये, अयमार्यां पुरस्कृत्येत एवाभिवर्तते भगवान् विभावसुः !

85 रामः—[3]अये, अयं भगवान् हुताशनः ! उपसर्पामस्तावत् ।

(सर्वे [4]उपसर्पन्ति)

---

[1] विभीषणः [3] अये, भगवान् विभावसुः a; .... .... भगवानग्निः । गच्छामस्तावत् b [4] परिक्रामन्ति

---

82 *(Entering)* SUGRĪVA—Victory, my lord!

83 Who, indeed, is this of respectable form that has sprung out of the blazing fire, bearing Janakā's daughter alive? [26]

84 LAKṢMAṆA—Oh, this is the divine Fire coming just this way, leading the worthy lady.

85 RĀMA—O, this is the Fire god! We will go to meet him. *(All go near him)*

---

82 (ಪ್ರವೇಶಿಸಿ) ಸುಗ್ರೀವ—ದೇವನಿಗೆ ಜಯವಾಗಲಿ !

83 ಜೀವಿತಳಾಗಿಯೇ ಇರುವ ಜಾನಕಿಯನ್ನು ಎತ್ತಿಕೊಂಡು ಉರಿಯುತ್ತಿರುವ ಬೆಂಕಿಯಿಂದ ಹೊರಕ್ಕೆ ಬಂದಿರುವ, ನಮಸ್ಕರಿಸಲು ಯೋಗ್ಯವಾದ ರೂಪವುಳ್ಳ ಈತನಾರು ? [೨೬]

84 ಲಕ್ಷ್ಮಣ—ಅಯೆ ! ಈ ಅಗ್ನಿದೇವನು ಆರ್ಯೆಯನ್ನು ಮುಂದುಮಾಡಿಕೊಂಡು ಈ ಕಡೆಯೇ ಬರುತ್ತಿದ್ದಾನೆ.

85 ರಾಮ—ಅಯೆ ! ಈತ ಅಗ್ನಿದೇವ ! ಹತ್ತಿರ ಹೋಗೋಣ.

( ಎಲ್ಲರೂ ಹತ್ತಿರ ಹೋಗುತ್ತಾರೆ )

[86] ततः प्रविशत्यग्निः सीतां गृहीत्वा)

[87] अग्निः—एष भगवान् नारायणः ! जयतु देवः !

[88] रामः—भगवन्, नमस्ते ।

[89] अग्निः—न मे नमस्कारं कर्तुमर्हति देवेशः ।

[90] इमां गृह्णीष्व राजेन्द्र ! सर्वलोकनमस्कृताम् ।
अपापामक्षतां शुद्धां जानकीं पुरुषोत्तम ॥२७॥

[91] अपि च,

[92] इमां भगवतीं लक्ष्मीं जानीहि जनकात्मजाम् ।
सा भवन्तमनुप्राप्ता मानुषीं तनुमास्थिता ॥२८॥

---

[86] *( Then enters Fire, bearing Sita )*

[87] FIRE—This is god Nārāyaṇa. Victory, my lord !

[88] RĀMA—O god ! I salute you.

[89] FIRE—You, the lord of gods, should not salute me.

[90] O lord of kings and best of men! accept this sinless, unscathed and pure Jānaki who is respected by all the worlds. [27]

[91] Further,

[92] Know this daughter of Janaka to be goddess Lakṣmī ; she has come to you, putting on a human body.

---

[86] (ಬಳಿಕ ಅಗ್ನಿಯು ಸೀತೆಯನ್ನು ಎತ್ತಿಕೊಂಡು ಪ್ರವೇಶಿಸುತ್ತಾನೆ)

[87] ಅಗ್ನಿ—ಈತ ಭಗವಾನ್ ನಾರಾಯಣ! ದೇವನಿಗೆ ಜಯವಾಗಲಿ!

[88] ರಾಮ—ಭಗವಂತನೆ, ನಿನಗೆ ನಮಸ್ಕಾರ.

[89] ಅಗ್ನಿ—ದೇವೇಶನಾದ ನೀನು ನನಗೆ ನಮಸ್ಕರಿಸಬಾರದು.

[90] ರಾಜೇಂದ್ರನಾದ ಪುರುಷೋತ್ತಮನೆ! ಸರ್ವಲೋಕನಮಸ್ಕೃತಳೂ ಪಾಪವಿಲ್ಲದವಳೂ, ಅಕ್ಷತಳೂ, ಶುದ್ಧಳೂ ಆದ ಈ ಜಾನಕಿಯನ್ನು ಸ್ವೀಕರಿಸು.

[91] ಮತ್ತು

[92] ಈ ಜಾನಕಿಯನ್ನು ಭಗವತಿ ಲಕ್ಷ್ಮಿಯೆಂದು ತಿಳಿ. ಮನುಷ್ಯಶರೀರ ತಾಳಿ ಅವಳು ನಿನ್ನನ್ನು ಹಿಂಬಾಲಿಸಿ ಬಂದಿದ್ದಾಳೆ. [೨೮]

[93] रामः—अनुगृहीतोऽस्मि ।

[94] जानतापि च वैदेह्याः शुचितां धूमकेतन ।
प्रत्ययार्थं हि लोकानामेवमेव मया कृतम् ॥२९॥

[95] (नेपथ्ये दिव्यगन्धर्वा गायन्ति)

[96] नमो भगवते त्रैलोक्यकारणाय नारायणाय !

[97] ब्रह्मा ते हृदयं जगत्त्रयपते ! रुद्रश्च कोपस्तव
नेत्रे चन्द्रदिवाकरौ सुरपते ! जिह्वा च ते भारती ।
सब्रह्मेन्द्रमरुद्गणं त्रिभुवनं सृष्टं त्वयैव प्रभो !
सीतेयं जलसम्भवालयरता विष्णुर्भवान् गृह्यताम् ॥

---

[93] RĀMA—I am beholden to you.

[94] O smoke-bannered god! it was just to convince the people that such a thing was done by me, although I knew quite well Vaidehi's purity. [29]

[95] *( Behind the curtain, celestial gandharvas sing )*

[96] Salutations to god Nārāyaṇa, cause of the three worlds!

[97] Brahma is your heart, O lord of the three worlds! Rudra is your wrath. The Moon and the Sun are your two eyes; the Goddess of Speech is your tongue. O lord of the gods! the three worlds, together with Brahma, Indra

---

[93] ರಾಮ—ಅನುಗೃಹೀತನಾದೆ.

[94] ಧೂಮಕೇತನನಾದ ಅಗ್ನಿಯೆ! ವೈದೇಹಿಯ ಶುಚಿಸ್ವಭಾವವನ್ನು ತಿಳಿದಿದ್ದರೂ ಜನರ ನಂಬಿಕೆಗಾಗಿಯೇ ನಾನು ಹೀಗೆ ಮಾಡಿದುದು. [೨೯]

[95] (ತೆರೆಯ ಹಿಂದೆ ದಿವ್ಯಗಂಧರ್ವರು ಹಾಡುತ್ತಾರೆ)

[96] ತ್ರೈಲೋಕ್ಯಕಾರಣನೂ ಭಗವಂತನೂ ಆದ ನಾರಾಯಣನಿಗೆ ನಮಸ್ಕಾರ!

[97] ಮೂರು ಜಗತ್ತುಗಳಿಗೂ ಒಡೆಯನಾದವನೆ! ಬ್ರಹ್ಮನೇ ನಿನ್ನ ಹೃದಯ; ರುದ್ರನೇ ನಿನ್ನ ಕೋಪ; ಚಂದ್ರಸೂರ್ಯರೇ ನಿನ್ನ ಕಣ್ಣುಗಳು; ಸುರ

98 (पुनर्नेपथ्ये अपरे गायन्ति)

99 मग्नेयं हि जले वराहवपुषा भूमिस्त्वयैवोद्धृता
विक्रान्तं भुवनत्रयं सुरपते ! पादत्रयेण त्वया ।
स्वैरं रूपमुपस्थितेन भवता देव्या यथा सांप्रतं
हत्वा रावणमाहवे न हि तथा देवाः समाश्वासिताः ॥

---

and the hosts of Maruts were created only by you. O lord! this Sītā is She (Lakṣmī) who is attached to her lotus-dwelling; You are Viṣṇu. Please accept her. [30]

98 *(Once again others sing behind the curtain)*

99 This earth which had sunk under water was raised only by You with the body of a Boar. O lord of gods! It was by you that these three worlds were encompassed with three strides. The gods were not so much comforted then as they have been now by you who, having slain Rāvaṇa in battle, are with your queen, putting on a (human) form out of your own free will. [31]

---

ಪತಿಯೆ! ಭಾರತಿಯೇ ನಿನ್ನ ನಾಲಿಗೆ; ಬ್ರಹ್ಮ, ಇಂದ್ರ, ಮರುದ್ಗಣಗಳಿಂದ ಕೂಡಿದ ತ್ರಿಭುವನ ಸೃಷ್ಟವಾದದ್ದು ನಿನ್ನಿಂದಲೇ; ಪ್ರಭುವೆ, ಈ ಸೀತೆ ಕಮಲಾಲಯದಲ್ಲಿ ಆಸಕ್ತಳಾದ ಲಕ್ಷ್ಮಿ; ನೀನೇ ವಿಷ್ಣು; ಇವಳನ್ನು ಸ್ವೀಕರಿಸು. [೩೦]

98 (ತೆರೆಯ ಹಿಂದೆ ಇತರರು ಹಾಡುತ್ತಾರೆ)

99 ನೀರಿನಲ್ಲಿ ಮುಳುಗಿಹೋಗಿದ್ದ ಈ ಭೂಮಿ ಮೇಲಕ್ಕೆತ್ತಲ್ಪಟ್ಟದ್ದು ನಿನ್ನಿಂದಲೇ. ಸುರಪತಿಯೆ! ಮೂರು ಭುವನಗಳೂ ಕೇವಲ ಮೂರು ಹೆಜ್ಜೆಗಳಿಂದ ಆಕ್ರಮಿಸಲ್ಪಟ್ಟದ್ದು ನಿನ್ನಿಂದಲೇ; ಆದರೆ, ಸ್ವೇಚ್ಛೆಯಿಂದ (ಮನುಷ್ಯ) ರೂಪ ತಾಳಿದ ನೀನು ರಾವಣನನ್ನು ಯುದ್ಧದಲ್ಲಿ ಕೊಂದು ದೇವಿಯೊಡಗೂಡಿರುವುದರಿಂದ ದೇವತೆಗಳು ಈಗ ಪಡೆದಿರುವಷ್ಟು ಸಮಾಧಾನವನ್ನು (ನಿನ್ನ ಆ ಹಿಂದಿನ ಕೃತಿಗಳಿಂದ) ಹೊಂದಿರಲಿಲ್ಲ. [೩೧]

100 अग्निः — भद्रमुख ! एते देवदेवर्षिसिद्धविद्याधरगन्धर्वाप्सरोगणाः स्वविभवैर्भवन्तं वर्धयन्ति ।

101 रामः—[1]अनुगृहीतोऽस्मि ।

102 अग्निः—भद्रमुख ! अभिषेकार्थमित इतो भवान् । (निष्क्रान्तौ)

103 रामः—[2]यदाज्ञापयति भगवान् ।

104 (नेपथ्ये) जयतु देवः ! जयतु स्वामी ! जयतु भद्रमुखः ! जयतु महाराजः ! जयतु रावणान्तकः ! जयत्वायुष्मान् !

---

[1] नमोऽस्तु सर्वदेवेभ्यः [2] अनुगृहीतोऽस्मि

---

100 FIRE—Sweet-faced sir, these hosts of gods, godly sages, Siddhas, Vidyādharas, Gandharvas and Apsarases congratulate you in accordance with their status.

101 RĀMA—I am obliged (to them).

102 FIRE — Sweet-faced sir, this way, this way for consecration, please.

103 RĀMA—As you bid. *( Exeunt ambo )*

104 *( Behind the curtain )* Victory to the lord! Victory to our master! Victory to the sweet-faced one! Victory to the great king! Victory to the destroyer of Rāvaṇa! Victory to the long-lived one!

---

100 ಅಗ್ನಿ — ಭದ್ರಮುಖನೆ! ಇಗೋ ದೇವತೆಗಳು, ದೇವರ್ಷಿಗಳು, ಸಿದ್ಧರು, ವಿದ್ಯಾಧರರು, ಗಂಧರ್ವರು, ಅಪ್ಸರ ಸ್ತ್ರೀಯರ ಸಮೂಹಗಳು ತಮ್ಮ ತಮ್ಮ ವಿಭವಕ್ಕನುಸಾರವಾಗಿ ನಿನ್ನ ಜಯಘೋಷ ಮಾಡುತ್ತಿದ್ದಾರೆ.

101 ರಾಮ — ಅನುಗೃಹೀತನಾದೆ.

102 ಅಗ್ನಿ — ಭದ್ರಮುಖ, ಅಭಿಷೇಕಕ್ಕೋಸ್ಕರ ಇತ್ತ ಬಾ.

( ಇಬ್ಬರೂ ಹೋಗುತ್ತಾರೆ )

103 ರಾಮ — ಭಗವಂತನ ಅಪ್ಪಣೆಯಂತೆ.

104 (ತೆರೆಯ ಹಿಂದೆ) ದೇವನಿಗೆ ಜಯವಾಗಲಿ! ಸ್ವಾಮಿಗೆ ಜಯವಾಗಲಿ!

105 विभीषणः[3]—एष एष महाराजः,

106 तीर्त्वा प्रतिज्ञार्णवमाहवेऽद्य सम्प्राप्य देवीं च विधूतपापाम् ।
देवैः समस्तैश्च कृताभिषेको विभाति शुभ्रे नभसीव चन्द्रः ॥

107 लक्ष्मणः[4]—अहो तु खल्वार्यस्य वैष्णवं तेजः !

108 यम-वरुण-कुबेर-वासवाद्यैस्त्रिदशगणैरभिसंवृतो विभाति ।
दशरथवचनात् कृताभिषेकस्त्रिदशपतित्वमवाप्य वृत्रहेव[5] ॥

---

[3] लक्ष्मणः [4] विभीषणः—अहो तु खलु देवस्य... [5] देवराजः

---

105 VIBHĪṢAṆA—Here is the great king!

106 Having crossed the ocean of his vows in the fight, having also regained to-day the queen freed of sin, and having been consecrated by all the gods, he shines like the moon in a clear sky. [32]

107 LAKṢMAṆA—Ah, the viṣṇuite lustre in my noble brother!

108 Surrounded by hosts of gods such as Yama, Varuṇa, Kubera and Indra, and having been consecrated on the

---

ಭದ್ರಮುಖನಿಗೆ ಜಯವಾಗಲಿ! ಮಹಾರಾಜನಿಗೆ ಜಯವಾಗಲಿ! ರಾವಣಾಂತಕನಿಗೆ ಜಯವಾಗಲಿ! ಆಯುಷ್ಮಂತನಿಗೆ ಜಯವಾಗಲಿ!

105 ವಿಭೀಷಣ—ಇಗೋ ಮಹಾರಾಜನು

106 ಈ ದಿನ ಯುದ್ಧದಲ್ಲಿ ಪ್ರತಿಜ್ಞಾಸಾಗರವನ್ನು ದಾಟಿ, ಪಾಪವಿಮುಕ್ತಳಾದ ದೇವಿಯನ್ನು (ಪುನಃ) ಪಡೆದು ಸಮಸ್ತ ದೇವತೆಗಳಿಂದಲೂ ಅಭಿಷಿಕ್ತನಾಗಿ ಶುಭ್ರವಾದ ಆಕಾಶದಲ್ಲಿ ಚಂದ್ರನು ಹೇಗೋ ಹಾಗೆ ಪ್ರಕಾಶಿಸುತ್ತಿದ್ದಾನೆ. [೩೨]

107 ಲಕ್ಷ್ಮಣ—ಆರ್ಯನ ವೈಷ್ಣವ ತೇಜಸ್ಸು ಎಷ್ಟು ಆಶ್ಚರ್ಯಕರ!

108 ದಶರಥನ ಮಾತಿನ ಮೇಲೆ ಅಭಿಷಿಕ್ತನಾದ (ಆರ್ಯನು) ಯಮ, ವರುಣ, ಕುಬೇರ, ಇಂದ್ರ ಮೊದಲಾದ ದೇವತೆಗಳ ಸಮೂಹಗಳಿಂದ ಸುತ್ತುವರಿಯ

